# ತಂಗಾಳಿ

( ವಿನೋದಪರ ಲೇಖನಗಳ ಚಿಕ್ಕ ಸಂಗ್ರಹ )



ಲೇಖಕರು :

“ ತಂಗಾಳಿ ”

[ ಬೆಲೆ : ೮



# ತಂಗಾಳಿ

( ವಿನೋದಪರ ಲೇಖನಗಳ ಚಿಕ್ಕ ಸಂಗ್ರಹ )

ಲೇಖಕರು :

“ ತೆಂಗಾಳಿ ”

೧೯೫೨ ]

[ ಬೆಲೆ: ೮ ಆಣೆ

# ತೊದಲ್ನುಡಿ

ಸುಮಾರು ೧೫ ವರುಷಗಳ ಹಿಂದೆ ಜನರ ಮನೋರಂಜನೆಗಾಗಿ ವಾರಪತ್ರಿಗಳಲ್ಲಿ ಪ್ರಕಟವಾದ ಕೆಲವು ಲೇಖನಗಳ ಸಂಗ್ರಹವಿದು. ವಿಶ್ರಾಂತಿ ಸಮಯದಲ್ಲಿ ಇವನ್ನು ಓದಿ ಮನಸ್ಸಿಗೆ ಆಲ್ಹಾದವನ್ನುಂಟುಮಾಡಲೆಂದು ವಾಚಕರ ಕೈಯಲ್ಲಿ ಈ ಸಂಗ್ರಹವನ್ನಿಡಲಾಗಿದೆ.

ಲೇಖನಗಳನ್ನು ಬರೆಯುವಾಗ ವಿಷಯಗಳನ್ನು ಆರಿಸುವದರಲ್ಲಾಗಲಿ, ಆರಿಸಿದ ವಿಷಯಗಳ ಮೇಲೆ ಬರೆಯುವದರಲ್ಲಾಗಲಿ ಯಾವದಾದರೊಂದು ಧ್ಯೇಯ ಅಥವಾ ಪದ್ಧತಿಯನ್ನನುಸರಿಸಿಲ್ಲ. ಪುಸ್ತಕರೂಪವಾಗಿ ಪ್ರಕಟಿಸುವ ವಿಚಾರವೂ ಆಗಿರಲಿಲ್ಲ. ಕೆಲವು ದಿವಸಗಳ ಹಿಂದೆ ನನ್ನೋರ್ವ ಮಿತ್ರರು ಈ ಲೇಖನಗಳುಳ್ಳ ವರ್ತಮಾನಪತ್ರಗಳ ತುಂಡುಗಳ ಸಂಗ್ರಹವನ್ನು ಓದಿದರು. ಎಲ್ಲಿಯ ರಸಿಕತೆಯು ಅವರಲ್ಲಿ ಸೇರಿತ್ತೋ; ಓದುತ್ತ ಒಂದೇ ಸವನೆ ನಗಹತ್ತಿದರು. ಲೇಖನಗಳನ್ನು ಒಟ್ಟುಗೂಡಿಸಿ ಅಚ್ಚು ಹಾಕಿಸ ಬೇಕೆಂದು ಆಗ್ರಹದ ಸೂಚನೆ ಮಾಡಿದರು. ಆ ಸೂಚನೆಯ ಪರಿಣಾಮವಿದು. ನನಗೆ ಸೂಚನೆಯನ್ನಿತ್ತ ಮತ್ತು ಅನೇಕ ಸಲಹೆಗಳನ್ನು ಕೊಟ್ಟ ಮಿತ್ರರಿಗೆಲ್ಲ ನಾನು ತುಂಬಾ ಆಭಾರಿಯಾಗಿದ್ದೇನೆ.

೧—೯—೧೯೫೭ —ತೆಂಗಾಳಿ

# ಪರಿವಿಡಿ

# ತಂಗಾಳಿ



ಹಳೆಯ ನಾಣ್ಣುಡಿಗಳೆಷ್ಟೋ ಈಗಿನ ಕಾಲದಲ್ಲಿ ಅನಾವಶ್ಯಕವಾಗಿವೆ. ಈಗಿನ ಕಾಲಕ್ಕನುಸಾರವಾಗಿ ಅವುಗಳ ತಿದ್ದುಪಡೆಯು ಅವಶ್ಯವಿದೆ. ಉದಾಹರಣಾರ್ಥ, ಹಳ್ಳಿಗಳಲ್ಲಿಯ ವಯೋವೃದ್ಧರು ಈಗಲೂ "ದೀಪದ ಕೆಳಗೆ ಬೆಳಕು ಇರುವದಿಲ್ಲ" ಎಂದು ಅನ್ನುತ್ತಾರೆ. ಆದರೆ ಈಗ ಇಲೆಕ್ಟ್ರಿಕ್ ದೀವಿಗೆಗಳ ಬೆಳಕು ದೀವಿಗೆಗಳ ಕೆಳಗೇ ಹೆಚ್ಚಾಗಿರುತ್ತದೆ!

* * * *

ಕಾಲ ಬಂದಂತೆ ನಾವು ನಡೆಯಲೇಬೇಕು. "ಕಾಲ ಬಂದಂತೆ ನಡೆಯದಿದ್ದರೆ ಕಾಲು ಕೊಟ್ಟ ದೇವರು ಸಿಟ್ಟಾಗುವನು" ಎಂದು ಶ್ರೀರಂಗರು ತಮ್ಮದೊಂದು ನಾಟಕದಲ್ಲಿ ಬರೆದಿದ್ದಾರೆ!

* * * *

"ಮಾತಿಗೆ ಮೊದಲು ಗಾದಿ, ಊಟಕ್ಕೆ ಮೊದಲು ಉಪ್ಪಿನಕಾಯಿ" ಎಂಬುದು ಬೇರೊಂದು ಹಳೆಯ ಗಾದಿಯ ಮಾತು. ಈಗಿನ ಕಾಲದಲ್ಲಿ ಇದರ ತಿದ್ದುಪಡೆಯ ಆವಶ್ಯಕತೆಯು ಹೆಚ್ಚಾಗಿ ಕಾಣುತ್ತದೆ.

"ಮಾತಿಗೆ ಮೊದಲು ಖುರ್ಚಿ, ವರ್ತಮಾನ ಪತ್ರದಲ್ಲಿ ಮೊದಲು ವಿನೋದ" ಎಂಬದು ಈಗಿನ ಕಾಲಕ್ಕೆ ಹೆಚ್ಚು ಉಚಿತವಾಗಿದೆ. ಇಲ್ಲವಾದರೆ, ಇಂಗ್ರೇಜಿ ವರ್ತಮಾನಪತ್ರಗಳಲ್ಲಿ Current Topics, Tete-a-tete, Tipsy cake, En Passant, By the way ಮೊದಲಾದ 'ಕಾಲಮು'ಗಳೇಕೆ ತಲೆದೋರುತ್ತಿದ್ದವು? ಕನ್ನಡ ಪತ್ರಗಳಲ್ಲಿ "ಖಂಡತುಂಡ ಮಾತು," "ತುಣುಕು ಮಿಣುಕು", "ಹುರಕು ಬರಕು", "ಮಸಾಲೆಯ ದೋಸೆ" ಮುಂತಾದ 'ಕಾಲಮು'ಗಳೇಕೆ ಇರುತ್ತಿದ್ದವು?

* * * *

ಆದ್ದರಿಂದ "ತಂಗಾಳಿ" ವಿನೋದದ 'ಕಾಲಮು' ಇರಬೇಕೆಂದು ಯೋಜಿಸಿ ಪ್ರಾರಂಭಿಸಿದ್ದೇವೆ. ಆದರೆ ಪ್ರಾರಂಭಿಸುವ ಮೊದಲು ಅನೇಕ ಸಾರೆ ವಿಚಾರ ಮಾಡಬೇಕಾಯಿತು. ಪ್ರತಿವಾರ ತಪ್ಪದೆ ಒಂದು ವಿನೋದ ತರಂಗದ 'ಕಾಲಮ್'ನ್ನು ವಾಚಕವೃಂದಕ್ಕೆ ಪೂರೈಸುವದು ಸಾಮಾನ್ಯ ಮಾತಲ್ಲ. ಓದಿ ನಗುವದು ಸುಲಭ! ಬರೆದು ನಗಿಸುವದು ಕಠಿಣ!!

* * * *

ವಾಚಕರು ರಸಿಕರೆಂಬ ಭಾವನೆಯಿಂದಲೇ ನಾವು ಮುಂದೆ ಸಾಗುತ್ತೇವೆ. ಅಂದರೇನೆ ಈ 'ಕಾಲಮಿ'ನಿಂದ ವಿಶೇಷ ವಿನೋದವು ದೊರೆಯುವದು. ಅನೇಕ ಸಾರೆ ಅನೇಕ ವಿಷಯುಗಳ ಮೇಲೆ ಬರೆಯಬೇಕಾಗುತ್ತದೆ. ಲೇಖಕರ ಉದ್ದೇಶವಿರದಿದ್ದರೂ, ಎಷ್ಟೋ ಸಾರೆ ಹಲಕೆಲವು ವಿಷಯುಗಳು ಹಲಕೆಲವರಿಗೆ ಅಸಮಾಧಾನವನ್ನು ಉಂಟುಮಾಡುವ ಸಂಭವವಿದೆ. ಆದರೆ ಓದುಗರು **ಹೇತುವಿನ** ಕಡೆಗೆ ಲಕ್ಷ ಕೊಡಬೇಕೇ ಹೊರತು, ಆಕಸ್ಮಾತ್ತಾಗಿ ಆ ವಿಡಂಬನೆಯಲ್ಲಿಯ ಕೊಂಕುತನವು ತಮ್ಮಲ್ಲಿಯ ವಿಶಿಷ್ಟ ಗುಣಕ್ಕೆ ಹೊಂದಿಕೆಯಾಗುವದೆಂಬ ಕಾರಣದಿಂದ ಅರಸಿಕರಾಗಬಾರದು. ಉದಾಹರಣಾರ್ಥ: ಜೀನತನದ ವಿಷಯುವಾಗಿ ಬರೆದೆವೆಂದು ಕಲ್ಪಿಸುವಾ. ಊರಿಗೆ ಒಬ್ಬನೇಕೆ, ಅನೇಕ ಜನ ಜಿಪುಣರಿರುವದು ಸಾಮಾನ್ಯವಾದ ಮಾತು. ಜೀನತನದ ವಿಷಯುವನ್ನು ಓದಿದ ಕೂಡಲೆ ವಾರಪತ್ರಿಕೆಯ ಸಂಪಾದಕರಿಗೆ "ನೀವು ನಿಮ್ಮ ಪತ್ರವನ್ನು ಇನ್ನು ಮೇಲೆ ಕಳಿಸಬೇಡಿರಿ" ಎಂದು ಮುಂತಾಗಿ ಪತ್ರ ಬರೆಯುವದು ಉಚಿತವಲ್ಲ! ಒಂದು ವೇಳೆ ಹೀಗೆ ಬರೆದರೆ ಒಬ್ಬ ವರ್ಗಣಿದಾರನು ಕಡಿಮೆಯಾಗುವದರಿಂದ ಪತ್ರಿಕೆಗೆ ಬಡತನ ಬರುವದಿಲ್ಲ. "ಜೀನನು ಕಡೆಗೂ ಜೀನನೇ! ವರ್ಗಣಿ ಹಣ ಉಳಿಸಲಿಕ್ಕೆ ಮಾರ್ಗ ತೆಗೆದನು!!" ಎಂದು ಅಂದು, ನಕ್ಕು ಪತ್ರ ಕಳಿಸುವದನ್ನು ನಿಲ್ಲಿಸಬಹುದು; ಈ ವಿಷಯ ಕೆಲವರ ಮುಂದೆ ಹೇಳಬಹುದು. ಬಹಳವಾದರೆ ಮರುವಾರ ಇದೇ ಕಾಲಮಿನಲ್ಲಿ ಪ್ರಕಟಿಸಬಹುದು.

* * *

ಜೀನತನದ ವಿಷಯುವಾಗಿ ಬರೆಯುವಷ್ಟರಲ್ಲಿ ಒಂದು ಚಿಕ್ಕ ಕಥೆಯು ನೆನಪಾಯಿತು:

ಒಂದು ಊರಲ್ಲಿ ಒಬ್ಬ ಮಹಾ ಜೀನನಿದ್ದನು. ಆತ ವಯಸ್ಸಿಗೆ ಬಂದ ತನ್ನ ಮಗನ ಸಲುವಾಗಿ ಕನ್ಯೆಯನ್ನು ಹುಡುಕಲು ಹೊರಟನು. ಹೋದ ಹೋದಲ್ಲೆಲ್ಲ ತನ್ನಂಥ ಜೀನರ ಮನೆತನವನ್ನೇ ಹುಡುಕುತಲಿದ್ದ. ಕಡೆಗೆ ಒಂದು ಊರಲ್ಲಿ ಒಬ್ಬ "ಪ್ರಖ್ಯಾತ" ಜೀನನ ಮನೆ ಸಿಕ್ಕಿತು. ಮಾತುಕತೆ ಸುರುವಾದೊಡನೆ "ನೀವು ಎಷ್ಟು ಜೀನರಿರುವಿರಯ್ಯಾ?" ಎಂದು ಆತ ನೇರ ವಾಗಿ ಕೇಳಿಬಿಟ್ಟ ! ಕೂಡಲೆ ೨ನೇ ಜೀನನು ಅಭಿಮಾನದಿಂದ ಉತ್ತರಕೊಟ್ಟ. "ನಮ್ಮ ಜೀನತನದ ಕಲ್ಪನೆಯಾಗಬೇಕೇ ನಿಮಗೆ? ನಮ್ಮ ಅಜ್ಜ ಮುತ್ತಜ್ಜರ ಕಾಲದಿಂದ ನಮ್ಮ ಮನೆಯಲ್ಲಿ ಒಂದು ರೊಟ್ಟಿ ಇದೆ. ಊಟದ ವೇಳೆಯಾದ ಕೂಡಲೆ, ನಾವು ಒಂದು ಡಬರಿಯ ತುಂಬ ನೀರು ತುಂಬಿ ಅದ ರಲ್ಲಿ ರೊಟ್ಟಿಯನ್ನು ಎದ್ದಿ, ಅದನ್ನು ಹಾಗೇ ತೆಗೆದಿಡುತ್ತೇವೆ; ಆ ನೀರನ್ನೇ ಕುಡಿದು ಸುಖದಿಂದ ಜೀವಿಸುತ್ತೇವೆ !" ಆಗ ಮೊದಲನೇ ಜೀನನಿಗೆ ಅಸಮಾ ಧಾನವಾಯಿತು. ಆತನೆಂದ: "ಛೀ! ನೀವು ಸಾಕಷ್ಟು ಜೀನರಿಲ್ಲ. ನಿಮ್ಮ ಮಗಳು ನನ್ನ ಸೊಸೆಯಾಗಿ ಬಂದರೆ ನನ್ನ ಮನೆ ಹಾಳು ಮಾಡಿಯಾಳು; ನಮ್ಮನ್ನು ದಿವಾಳಿ ತೆಗೆಸಿಯಾಳು. ನಮ್ಮ ಮನೆಯಲ್ಲಿಯೂ ಒಂದು ರೊಟ್ಟಿ ಇದೆ. ಊಟದ ವೇಳೆಗೆ ಒಂದು ಡಬರಿಯಲ್ಲಿ ನೀರು ತಂದು ಅದರ ಮೇಲೆ ರೊಟ್ಟಿಯ ನೆರಳು ಬೀಳುವಂತೆ ದೂರದಲ್ಲಿ ರೊಟ್ಟಿಯನ್ನು ಹಿಡಿಯುತ್ತೇವೆ. ಆ ಮೇಲೆ ರೊಟ್ಟಿಯನ್ನು ತೆಗೆದಿಟ್ಟು ಆ ನೀರನ್ನು ಕುಡಿಯುತ್ತೇವೆ!!"



# ಕವಿ

ನನಗೆ ಕವಿಯಾಗಬೇಕೆಂಬ ಇಚ್ಛೆ ಬಹಳ. ಕಡೆಗೆ ನನ್ನನ್ನು 'ಕವಿ' ಎಂದು ಕರೆದರೆ ಸಾಕು; ಅಷ್ಟೇ ಸಂತೋಷ. ಆದರೆ ಕವಿತೆ ಬರೆಯದಿದ್ದರೆ, ಕವಿಯೆಂದು ಯಾರು ಕರೆಯುವರು? ಅಂತೆಯೇ ಕವಿತೆ ಬರೆಯಲಿಕ್ಕೆ ಪ್ರಾರಂಭಿಸಿದೆ. ಅಂದರೆ, ಪ್ರಾರಂಭಿಸಲು ಪ್ರಯತ್ನಿಸಿದೆ. ಕೆಳಗೆ ಕೊಟ್ಟ ಕೆಲವು ಮಾದರಿಯ ಪದ್ಯಗಳು ನನ್ನ ಪ್ರಯತ್ನದ ಪುಷ್ಪ ಫಲಗಳು. ನನ್ನ ಪ್ರಯತ್ನವು ಸಫಲವಾಯಿತೋ ನಿಷ್ಫಲವಾಯಿತೋ ವಾಚಕ ವೃಂದವೇ

* *

ಆದರೆ "ನರಕವಿಗಳಿದ್ದಲ್ಲಿ ವರಕವಿಗಳು ವಿದ್ಯೆ ತೋರಬಾರದು (!?)" ಎಂದು ಕವಿಯು ಹೇಳಿದಂತೆ ಕವಿಗಳು ಮಾತ್ರ ಇವುಗಳ ಕಡೆಗೆ ಲಕ್ಷ್ಯ ಕೊಡಬಾರದು. ನನ್ನ ಕವಿತೆಗಳು ಜನಸಾಮಾನ್ಯರಿಗಾಗಿ ಇವೆ; ಕವಿಗಳಿಗಲ್ಲ. ಗುಡ್ಡಕ್ಕೆ ಕಲ್ಲು ಹೊರುವಷ್ಟು ಹುಚ್ಚ ನಾನಲ್ಲ. ಸಮುದ್ರಕ್ಕೆ ನೀರಿನ ಕೊಡ ಹೊರುವಷ್ಟು ವಿಚಾರಶೂನ್ಯನಲ್ಲ. ಇಲೆಕ್ಟ್ರಿಕ್ ಪಾವರ ಹೌಸಿಗೆ ಕೈದೀಪ ಹಿಡಿದುಕೊಂಡು ಹೋಗುವಷ್ಟು ಮೂರ್ಖನಲ್ಲ. 'ಆತ್ಮಸಂತೋಷದಿಂದ ಮತ್ತು ಅಕ್ಕಲ ಹುಷಾರಿಯಿಂದ' ಬರೆಯುತ್ತಿರುವ ನಾನು ಜಾಣನಿದ್ದೇನೆ! ನನಗೆ ತಿಳುವಳಿಕೆ ಇದೆ !!

* * * *

ಕವಿಯು ತನ್ನ ಸ್ಫೂರ್ತಿಯ ಬಲದಿಂದ ಅರ್ವಾಚೀನ ಶಾಸ್ತ್ರೀಯ ಕೌತುಕಗಳಿಗಿಂತ ಹೆಚ್ಚು ಅಗಾಧವಾದ ಕೃತಿಗಳನ್ನು ಮಾಡಬಲ್ಲನು; ವಸ್ತುಗಳನ್ನು ರಚಿಸಬಲ್ಲನು. ನಾನೇ ಒಂದು ಕಡೆಯಲ್ಲಿ ಹೀಗೆ ಬರೆದಿಲ್ಲವೆ?

ಹಕ್ಕಿಯಾಗಿ ಹಾರುವೆನು
ಚಿಕ್ಕಿಯಾಗಿ ಬೆಳಗುವೆನು
ಬೆಕ್ಕಿನಂತೆ ಜಿಗಿಯುವೆನು
ಸೊಕ್ಕಿನಿಂದ ಸಂದಿಗೊಂದಿಗಳಲಿ ||

* * * *

ಸುಗ್ರಾಸ ಭೋಜನವಿಲ್ಲದೆ ಯಾರೂ ಕವಿಯಾಗಲಾರರೆಂದು ಅನ್ನುವ ವಾಡಿಕೆ. ಆದರೆ ಇದು ತಪ್ಪು. ವಾಕ್ಪಟದಲ್ಲಿ ನಟನು ಘೋರವಾದ ಅರಣ್ಯ ದಲ್ಲಿ ಹಸಿವೆ ನೀರಡಿಕೆಗಳಿಂದ ಬಳಲುತ್ತಿದ್ದರೂ, ಜಿಗಿಜಿಗಿದು ಹಾಡುವದನ್ನು ಕಣ್ಣಾರೆ ಕಾಣುತ್ತೇವೆ. ನಾನು ಕವಿ ಇದ್ದರೇನಾಯಿತು? ನೀವು ಕವಿ ಇರದಿದ್ದರೇನಾಯಿತು? ಕಂಡದ್ದನ್ನೂ ಕೇಳಿದ್ದನ್ನೂ ನಂಬಲೇಬೇಕು. ನಂಬು ಗೆಯ ವಿಷಯವಾಗಿ ನನ್ನ ಬೇರೊಂದು ಕವಿತೆಯಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದೇನೆ:

ಕಂಡದ್ದನ್ನು ನಂಬದವರಾರು
ಕಾಣದ್ದನ್ನು ನಂಬುವವರಾರು
ಕಣ್ಣು ಕೊಟ್ಟ ಪರಮಾತ್ಮನು
ಮುಕ್ಕಣ್ಣನಲ್ಲವೇ ಮರುಳೇ ?

* * * *

ಕಡೆಗೊಮ್ಮೆ ಕವಿಯಾದೆ! ನೀವೂ ದಯವಿಟ್ಟು ನನ್ನನ್ನು ಕವಿಯೆಂದು ಕರೆಯಿರಿ. ದೈವದ ಬಾಯಿಯಲ್ಲಿ ದೇವರಿದ್ದಾನೆ. ನೀವೆಲ್ಲ ಹಾರೈಸಿದರೆ, ಕವಿ ಯಾಗಿಯೇ ತೀರುವೆನು. ಯಾವನೊಬ್ಬನನ್ನು "ಹುಚ್ಚ" "ಹುಚ್ಚ" ಎಂದು ಹುಡುಗರು ಬೆನ್ನು ಹತ್ತಿದರೆ ಜಾಣನೂ ಹುಚ್ಚನಾಗುವದು ಸ್ವಾಭಾವಿಕ. ಹಾಗೆಯೇ ನೀವೆಲ್ಲರೂ "ಕವಿ" ಎಂದು ಕರೆದರೆ ನಾನೂ ಕವಿಯಾಗುವದು ನಿಶ್ಚಯ. ಆ ಮೇಲೆ ಇದರಂತೆಯೇ ನೂರಾರು ಕವಿತೆ ಗಳನ್ನು ಬರೆದು ನಿಮ್ಮೆದುರಿಗೆ ಇಡುವೆ!

* * * *

ಇಷ್ಟರಲ್ಲಿ ಒಂದು ಹಳೆಯ ಮಾತು ನೆನಪಾಯಿತು:

ಧಾರವಾಡದಿಂದ ಹೊರಡುವ ಕನ್ನಡ ಮಾಸಿಕಕ್ಕೆ ಓರ್ವ "ಕವಿ"ಯು ಒಂದು "ಕವಿತೆ"ಯನ್ನು ಕಳಿಸಿದನು. ಪಾಪ! ಕವಿಗೆ ಪದವಿ ಬಿರುದಾವಳಿಗಳಿದ್ದಿಲ್ಲ. ಮಾಸಿಕವು ಮೇಲ್ತರಗತಿಯದು. ಅದರ ಸಂಪಾದಕರು ನಾಮಾಂಕಿತ ವಾಙ್ಮಯ ವಿಶಾರದರು! ಆದ್ದರಿಂದ "ಕವಿ"ಯು ಭೀತಿಗೊಂಡು, "ನನ್ನ ಕವಿತೆಯನ್ನು ತಿದ್ದಿ ನಿಮ್ಮ ಮಾಸಿಕದಲ್ಲಿ ಸೇರಿಸಿರಿ. ಇದರಂತೆ ಮುಂದೆಯೂ ಕವಿತೆ ಕಳಿಸುವೆ" ಎಂದು ಮುಂತಾಗಿ ಬರೆದಿದ್ದನು. ಅದಕ್ಕೆ ಪ್ರತ್ಯುತ್ತರವಾಗಿ ಸಂಪಾದಕ ಮಹಾಶಯರು ಹೀಗೆ ಬರೆದರು: "ನಾವು ನಿಮ್ಮ ಕವಿತೆಯನ್ನು ತಿದ್ದಿ ಹಾಕುವವರಿದ್ದೆವು. ಆದರೆ ಮುಂದೆ ಪುನಃ ಕವಿತೆಗಳನ್ನು ಕಳಿಸುವ ಬೆದರಿಕೆಯನ್ನು ನೋಡಿ ಈಗ ಕಳಿಸಿದ ಕವಿತೆಯನ್ನು ಈ ಪತ್ರದ ಜೊತೆಗೆ ತಿರುಗಿ ಕಳಿಸಿದ್ದೇವೆ!!"



# ಇಲೆಕ್ಶನ್

"ಇಲೆಕ್ಶನ್" ಎಂದಾಕ್ಷಣ ಶಾಲೆಯ ಹುಡುಗರಿಗೆ ಡ್ರಿಲ್ ಮಾಸ್ತರರು "ಅಟೆನ್‌ಶನ್" ಅಂದಂತೆ ಆಗುತ್ತದೆ. ಅಂಗ್ರಾಂಗದಲ್ಲಿ ವಿದ್ಯುತ್‌ಪ್ರವೇಶ ವಾದಂತೆ ಆಗುತ್ತದೆ. ಕಿವಿಗಳು ನೀಟಾಗುತ್ತವೆ. (ಅಂದರೆ ಉದ್ದವಾಗುತ್ತ ವೆಂದಲ್ಲ!) ಅಂಗಾಂಗದಲ್ಲಿ ರೋಮಾಂಚನವಾಗುತ್ತದೆ. ಕಣ್ಣುಗಳು ತೆರೆಯು ತ್ತವೆ. ಬಾಯಿಯು ಮುಚ್ಚುತ್ತದೆ. ಮೂಗು ಹಿಡಿದರೆ ಬಾಯಿ ತಾನೇ ತೆರೆಯುತ್ತದೆಂದು ಇಲ್ಲಿ ಬರೆಯುವ ಆವಶ್ಯಕತೆ ಇಲ್ಲ!

*　　*　　*　　*

ಇಲೆಕ್ಶನ್‌ದ ಸುದ್ದಿ ಹೊರಟರೆ ಮರಾಠಿ ಭಾಷೆಯಲ್ಲಿ ಬರೆದ "ಸ್ಥಾನಿಕ ಸ್ವರಾಜ್ಯ" ಎಂಬ ನಾಟಕವು ತನ್ನಿಂದ ತಾನೇ ನೆನಪಾಗುತ್ತದೆ. ಸಿರಿಗನ್ನಡಂ ಗೆಲ್ಗೆ! ಕನ್ನಡದಲ್ಲಿ ಅಂಥ ನಾಟಕವಿರದಿದ್ದರೆ ಸುಮ್ಮನೆ ಕೂಡ್ರುವಾ. ಮರಾಠಿ ನಾಟಕದ ಉಲ್ಲೇಖವಿಲ್ಲೇಕೆ?

ಇಲೆಕ್ಶನ ಬಂತೆಂದರೆ ಉಮೇದವಾರರಿಗೆ ಬಲು ಹುರುಪು. ಉಮೇದ ವಾರರ ಏಜಂಟರಿಗಂತೂ ಹೆಚ್ಚಿನ ಹುರುಪು. ಮತದಾರರ ಗೋಳಂತೂ ನಾಟಕ ಬರೆಯುವ ಹಾಗೆ ಆಗುತ್ತದೆ. ಅಂದರೆ ಮೋಜಿನದಾಗುತ್ತದೆಂದಲ್ಲ. "ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟ!"

ಪಾಶ್ಚಾತ್ಯ ದೇಶಗಳಲ್ಲಿ ಇಲೆಕ್ಶನ್ ಬಂತೆಂದರೆ ಎತ್ತ ನೋಡಿದತ್ತ ಸಭೆಗಳು ಕೂಡುತ್ತವೆ. ಭಿನ್ನ ಭಿನ್ನ ಪಕ್ಷದ ಉಮೇದವಾರರು ತಾವು ಮಾಡಿದ ಕಾರ್ಯಕಲಾಪಗಳನ್ನು ವಿಸ್ತರಿಸಿ ಬೆಳಿಸಿ ಹೇಳಿ, ಮುಂದೆ ಮಾಡಬಹುದಾದ ಕಾರ್ಯಕ್ರಮವನ್ನು ಮತದಾರರ ಎದುರಿಗೆ ಇಟ್ಟು, ಅವರ ಬೆಂಬಲವನ್ನು

ಅಪೇಕ್ಷಿಸುತ್ತಾರೆ. ನಮ್ಮ ದೇಶದಲ್ಲಿ ಮೋಟರಿನ ಅನುಕೂಲತೆಯನ್ನು ಮಾಡಿ (ಅಂದರೆ ಮೋಟಾರಿನಲ್ಲಿ ಮತದಾರರನ್ನು ಹೊತ್ತು ತಂದು!) ತರ ತರದ ಪಕ್ವಾನ್ನಗಳನ್ನು ತಿನ್ನಿಸಿ ಹೋಟು ತೆಗೆದುಕೊಳ್ಳುತ್ತಾರೆ.

ತಾರತಮ್ಯವು ಇಲ್ಲಿಗೆ ಮುಗಿಯಲಿಲ್ಲ. ಪಶ್ಚಿಮದಲ್ಲಿ ಒಬ್ಬ ಉಮೇದವಾರನು ಆರಿಸಿ ಬಂದ ಮೇಲೆ ಮತದಾರಸಂಘಕ್ಕೆ ಇಲೆಕ್ಶನದ ವೇಳೆಯಲ್ಲಿ ಕೊಟ್ಟ ಕಾರ್ಯಕ್ರಮದ ವಚನವನ್ನು ಪಾಲಿಸಲು ಪ್ರಯತ್ನಿಸುತ್ತಾನೆ. ನಮ್ಮ ದೇಶದಲ್ಲಿ ಅದರ ವಿಪರೀತ. ಹೋಟು ಹಾಕಿ ಮತದಾರನು ಹೊರಗೆ ಬಂದ ಕೂಡಲೆ ಅವನನ್ನು ಕೇಳುವವರೇ ಇಲ್ಲ. ಮಾತನಾಡಿಸುವವರಿಲ್ಲ. ತಿರುಗಿ ಮನೆಗೆ ಒಯ್ಯಲು ಮೋಟಾರಿಲ್ಲ. ಪಕ್ವಾನ್ನದ ಮಾತಂತೂ ಇಲ್ಲೇ ಇಲ್ಲ. ಪಕ್ವಾನ್ನವು ಇನ್ನೂ ಹೋಟು ಹಾಕದ ಮತದಾರರ ಸಲುವಾಗಿ ಇರುತ್ತದಷ್ಟೇ. ಹೋಟು ಹಾಕಿ ಹೊರಗೆ ಬಂದವರ ಸಲುವಾಗಿ ಇರುವದಿಲ್ಲ. ಆದುದರಿಂದ ಮುಂದಿನ ಇಲೆಕ್ಶನದಲ್ಲಿ ಒಮ್ಮೆ ಬಿಟ್ಟು ಎರಡು ಸಾರೆ ಪಕ್ವಾನ್ನ ಭುಂಜಿಸಬೇಕೆನ್ನುವವರು ಸಂಜೆಯ ತನಕ ಹೋಟು ಹಾಕುವದನ್ನು ತಡೆದು ಚೈನಿ ಹೊಡೆಯಬೇಕೆಂದು ನಮ್ಮ ಪ್ರೇಮಪೂರ್ವಕ ಸಲಹೆ!

*

ಒಮ್ಮೆ ಇಂಗ್ಲಂಡಿನಲ್ಲಿ ಸಭೆಯು ಕೂಡಿತು ಇಲೆಕ್ಶನ ಸಭೆಯು. ಉಮೇದವಾರನೊಬ್ಬನು ಆವೇಶಪೂರ್ವಕವಾಗಿ ಭಾಷಣ ಮಾಡುತ್ತಿದ್ದನು. ಸಭಿಕರಲ್ಲಿ ವಿರೋಧ ಪಕ್ಷದ ಮತದಾರರೂ ಇದ್ದರು. ಅವರಲ್ಲೊಬ್ಬನು ಎದ್ದು ನಿಂತು ಉಮೇದವಾರನಿಗೆ ಅಂದ: "ನೀವು ಬೇಕಾದ್ದನ್ನು ಹೇಳಿರಿ. ಅದು ನನ್ನ ಒಂದು-ಕಿವಿಯಿಯಿಂದ ಒಳಹೊಕ್ಕು ಎರಡನೆಯ ಕಿವಿಯಿಂದ ಹೊರಬೀಳುತ್ತದೆ." ತಟ್ಟನೆ ಉಮೆದವಾರನು ನುಡಿದ: "ಓಹೋ! ನಿಮ್ಮ ಎರಡೂ ಕಿವಿಗಳ ನಡುವೆ ಆರಪಾರ ದಾರಿ ಇರಲಿಕ್ಕೆ ಬೇಕು!"

* * * *

ಇಂಗ್ಲಂಡದಿಂದ ಪರದೇಶಗಳಿಗೆ ಹೋಗುವ ಮತ್ತು ಪರದೇಶದಿಂದ ಇಂಗ್ಲಂಡಕ್ಕೆ ಬರುವ ಸರಕುಗಳ ಮೇಲೆ ಬಹಳ ದಿವಸಗಳಿಂದ ಕರವಿದ್ದಿಲ್ಲ. ಕರವಿರಬಾರದೆಂದೇ ಪ್ರಸಿದ್ಧ ಮುತ್ಸದ್ದಿಗಳ ಮತ್ತು ಅರ್ಥಶಾಸ್ತ್ರವಿಶಾರದರ

ಅಭಿಪ್ರಾಯವಿತ್ತು. ಈಗಾದರೂ ರಾಜಕಾರಣ ಚತುರರಾದ ಲಾಯಿಡ ಜಾರ್ಜರ ಅಭಿಪ್ರಾಯವು ಹೀಗೇ ಇರುತ್ತದೆ. ಆದರೆ ೧೯೩೧ನೇ ಇಸ್ವಿಯಲ್ಲಿ ನಡೆದ ಇಲೆಕ್ಶನದ ಕಾಲಕ್ಕೆ ಮುಂದ ಪಕ್ಷದವರು ಕರ ಹೇರಬೇಕೆಂದು ತಮ್ಮ ಕಾರ್ಯಕ್ರಮವನ್ನು ನಿಶ್ಚಯಿಸಿದರು. ಆಗ ಒಂದು ಇಲೆಕ್ಶನ ಸಭೆಯಾದ ನಂತರ ಇಬ್ಬರು ಪ್ರತಿಸ್ಪರ್ಧಿಗಳಲ್ಲಿ ಕೆಳಗಿನಂತೆ ಸಂಭಾಷಣೆಯಾಯಿತು:—

ಕರಕ್ಕೆ ಪ್ರತಿಕೂಲನು: "ಏನಯ್ಯ, ಸ್ವರ್ಗವಾಸಿ ಆಂಗ್ಲ ಮುತ್ಸದ್ದಿಗಳೆಲ್ಲ ಆಯಾತ-ನಿರ್ಯಾತವಾಗುವ ಸರಕುಗಳ ಮೇಲೆ ಕರ ಹೇರಬಾರದೆಂದು ಅನ್ನುತ್ತಿದ್ದರು. ನೀವು ಕರ ಹೇರಹತ್ತಿದಿರಿ. ಈ ವಿಷಯ ಅವರ ಆತ್ಮಕ್ಕೆ ಗೊತ್ತಾದರೆ ಕಳವಳ ಪಡದೆ ಇರರು."

ಕರಕ್ಕೆ ಅನುಕೂಲನು:— ನಾನು ಸ್ವರ್ಗಕ್ಕೆ ಹೋದ ಮೇಲೆ ಅವರಿಗೆ ತಿಳಿಸಿ ಹೇಳುವೆನು.

ಕರಕ್ಕೆ ಪ್ರತಿಕೂಲನು:— ಒಂದು ವೇಳೆ ಅವರು ಸ್ವರ್ಗದಲ್ಲಿರದಿದ್ದರೆ?

ಕರಕ್ಕೆ ಅನುಕೂಲನು:— ನೀನು ಅವರಿಗೆ ತಿಳಿಸಿ ಹೇಳು!!

# ದಾಂಪತ್ಯಸುಖ-ರಕ್ತದಾನ-ಥರ್ಡಕ್ಲಾಸ ಪ್ಯಾಸೆಂಜರರು

ಪಂಜಾಬದಲ್ಲಿ ಒಬ್ಬ ಪುಢಾರಿಯು ಲೆಜಿಸ್ಲೆಟಿವ್ಹ ಅಸೆಂಬ್ಲಿಗೆ ಉಮೇದವಾರರಾಗಿದ್ದಾರೆ. ಅವರ ಪತ್ನಿಯು ಪಂಜಾಬ ಲೆಜಿಸ್ಲೆಟಿವ್ಹ ಕೌನ್ಸಿಲಿಗೆ ಉಮೇದವಾರಳಾಗಿದ್ದಾಳೆ. ಉಭಯ ದಂಪತಿಗಳು ಜಯಶಾಲಿಗಳಾಗಲೆಂದು ಪ್ರಾರ್ಥಿಸುತ್ತೇವೆ!

*   *   *   *

ಗಂಡಹೆಂಡರಿಬ್ಬರೂ ಸರಕಾರಿ ನವಕರಿಯಲ್ಲಿದ್ದರೆ ಇಬ್ಬರನ್ನೂ ಒಂದೇ ಊರಲ್ಲಿಡುವ, ಮತ್ತು ವರ್ಗಾಯಿಸಿದರೆ ಇಬ್ಬರನ್ನೂ ಒಂದೇ ಊರಿಗೆ ವರ್ಗ

ಮಾಡುವ ಸವಲತ್ತು ಇಟ್ಟಿದ್ದಾರೆ. ಅವರಂತೆ ಹೋದ ಅಸಹಕಾರ ಚಳವಳಿಯಲ್ಲಿ ಗಂಡಹೆಂಡರಿಬ್ಬರಿಗೂ ಶಿಕ್ಷೆಯಾದರೆ, ಇಬ್ಬರನ್ನೂ ಒಂದೇ ಜೇಲಿನಲ್ಲಿಡುವ ಸೌಕರ್ಯವನ್ನು ಸಹ ಸರಕಾರದವರು ಕೆಲವೆಡೆಯಲ್ಲಿ ಮಾಡಿದ್ದರು. ಹೀಗೆ ಸರಕಾರದವರು ಯಾವಾಗಲೂ ದಾಂಪತ್ಯ ಸುಖವನ್ನು ಲಕ್ಷದಲ್ಲಿಟ್ಟಿದ್ದಾರೆ!

* * * *

ಪಂಜಾಬದಲ್ಲಿ ಒಂದು ವೇಳೆ ಜನರ ಬೆಂಬಲದ ಜೋರಿನಿಂದಾಗಲಿ ನಮ್ಮ ಪ್ರಾರ್ಥನೆಯ ಬಲದಿಂದಾಗಲಿ ಮೇಲ್ಕಾಣಿಸಿದ ದಂಪತಿಗಳು ಆರಿಸಿ ಬಂದದ್ದಾದರೆ ಗಂಡನು ಅಸೆಂಬ್ಲಿಯಲ್ಲಿ ಮತ್ತು ಹೆಂಡತಿಯು ಕೌನ್ಸಿಲಿನಲ್ಲಿ ಕೆಲಸ ಮಾಡಬೇಕಾಗುವದು. ಸರಕಾರದವರು ಇವರೀರ್ವರನ್ನು ಬೇರೆ ಬೇರೆ ಇಡದೆ ಒಬ್ಬರ ಸ್ಥಳ ಬದಲಾಯಿಸಿ; ಅಂದರೆ ಪತಿಯನ್ನು ಕೌನ್ಸಿಲ ಮೆಂಬರನನ್ನಾಗಿಯಾಗಲಿ ಅಥವಾ ಪತ್ನಿಯನ್ನು ಅಸೆಂಬ್ಲಿಯ ಮೆಂಬರಳನ್ನಾಗಿಯಾಗಲಿ ಮಾಡಬೇಕೆಂದು ನಮ್ಮ ಸೂಚನೆಯು. ಹೀಗೆ ಮಾಡುವದರಿಂದ ಇಬ್ಬರೂ ಸರಕಾರದ ಆಭಾರ ಮನ್ನಿಸದಿರರು!

ಆದರೆ ಇಬ್ಬರೂ ಒಂದೇ ಕೌನ್ಸಿಲಿಗೆ ಅಥವಾ ಅಸೆಂಬ್ಲಿಗೆ ಉಮೇದವಾರರಾಗುವದು ಇವರ ಕೈಯಲ್ಲಿತ್ತು. ಅದನ್ನು ಬಿಟ್ಟುಕೊಟ್ಟು ಇಬ್ಬರೂ ಬೇರೆ ಬೇರೆ ನಿಲ್ಲಲು ಬೇರೆ ಕಾರಣವೇನಾದರೂ ಇರುವದೋ ಏನೋ ಯಾರು ಬಲ್ಲರು? ಹೆಂಡತಿಯ ಕಾಟ ತಪ್ಪಿಸಿಕೊಳ್ಳಲು ಗಂಡನು ಬೇರೆ "ಗೃಹ"ಕ್ಕೆ ಉಮೇದವಾರನಾಗಿರಬಹುದೊ? ಶಕ್ಯ!

* * * *

ಏನೇ ಆಗಲಿ, ಗವ್ಹರ್ನರ ಸಾಹೇಬರು ಒಮ್ಮೆ ಅವರನ್ನು ವಿಚಾರಿಸಿ, ಒಬ್ಬರಿಗೊಬ್ಬರನ್ನು ತಪ್ಪಿಸಲಿಕ್ಕೆ ಬೇರೆ ಬೇರೆ ನಿಂತಿರದಿದ್ದರೆ, ಅವರನ್ನು ಒಂದೇ ಗೃಹದ ಮೆಂಬರರನ್ನಾಗಿ ಮಾಡುವದು ಯೋಗ್ಯ ಮತ್ತು ಹಿತಕರ. ಒಂದು ವೇಳೆ ಹೀಗೆ ಒಂದು ಗೃಹಕ್ಕೆ ಆರಿಸಿ ಬಂದವರನ್ನು ಎರಡನೇ ಗೃಹದ ಸದಸ್ಯರನ್ನಾಗಿ ಮಾಡುವದು ಗವ್ಹರ್ನರರ ವಿಶೇಷ ಅಧಿಕಾರದಲ್ಲಿ ಇರದಿದ್ದರೆ, ಇಂಥ

ಅಧಿಕಾರವನ್ನು ಪಾರ್ಲಮೆಂಟಿನಿಂದ ಪಡೆದು ಈ ಧರ್ಮಕಾರ್ಯವನ್ನು ತೀವ್ರ ಕೊನೆಗಾಣಿಸಬೇಕು.

* * * *

ಮೊದಲಿನ ಕಾಲದಲ್ಲಿ ಧನದಾನ, ಭೂದಾನ, ವಿದ್ಯಾದಾನ, ಕನ್ಯಾದಾನ, ಜೀವದಾನ ಮುಂತಾದವುಗಳ ಪ್ರಚಾರವಿತ್ತು. ಈಗಿನ ಕಾಲದಲ್ಲಿ ರಕ್ತದಾನವು ಒಂದು ದೊಡ್ಡ ದಾನವಾಗಿದೆ. ಮತ್ತು ಹೀಗೆ ರಕ್ತದಾನ ಮಾಡಿದವರಲ್ಲಿ ಇಸ್ಮಾಯಿಲ ಹಕ್ಕಿ ಎಂಬ ತುರ್ಕಿ ತರುಣನು ಶ್ರೇಷ್ಠತಮನೆಂದು ಎಣಿಸಲ್ಪಟ್ಟಿದ್ದಾನೆ. ಇವನಿಗೆ "ರಕ್ತದಾನಶೂರ" ಎಂಬ ಬಂಗಾರದ ಪದಕವನ್ನು ಇಸ್ತಂಬೂಲದ ಮ್ಯುನಿಸಿಪಾಲಟಿಯವರು ಕೊಡುವವರಿದ್ದಾರೆ.

* * * *

ಇಸ್ಮಾಯಿಲ ಹಕ್ಕಿಯ ವಯಸ್ಸು ೨೬ ವರ್ಷ; ಇವನ ತೂಕ ೨೫೪ ಪೌಂಡು; ಶರೀರದಲ್ಲಿ ರಕ್ತದ ಪೂರೈಕೆ ಇರದೆ ಸಾಯುತ್ತಿದ್ದ ೧೪೫ ಜನರಿಗೆ ರಕ್ತ ಕೊಟ್ಟಿರುವನು. ಇಲ್ಲಿಯ ವರೆಗೆ ೧೬೦ ಪಾಯಿಂಟ ಅಂದರೆ ೨೦ ಗ್ಯಾಲನ್ ರಕ್ತ ಕೊಟ್ಟಿದ್ದಾನೆ. ೧೪೪ ಜನರನ್ನು ಉಳಿಸಿದ್ದಾನೆ. ಇನ್ನೂ ರಕ್ತ ಕೊಡಬೇಕೆಂದು ಸದೃಢನಾಗಿ ಇರುವಂತೆಯೂ ರಕ್ತವು ಶುದ್ಧವಾಗಿ ಇರುವಂತೆಯೂ ಎಚ್ಚರಿಕೆ ತೆಗೆದುಕೊಳ್ಳುತ್ತಾನೆ.

* * * *

ನಮ್ಮ ದೇಶದಲ್ಲಿಯೂ ಮನಬಂದಂತೆ ಮೇಯ್ದು ಧಷ್ಟಪುಷ್ಟರಾದವರಿದ್ದಾರೆ. ಹೀಗೆ ರಕ್ತ ಕೊಡುವ ಪರೋಪಕಾರದ ಕೆಲಸವನ್ನು ಯಾಕೆ ಮಾಡಬಾರದು? ರಕ್ತದ ಕೊರತೆಯಿಂದ ಪೀಡಿತರಾದವರ ಕಲ್ಯಾಣವಾಗುವದು. ಜೀವದ ಹಂಗುದೊರೆದವರು ಪುನಃ ಜೀವದ ಆಶೆ ತಾಳುವರು. ರಕ್ತದಾನವೆಂದರೆ ಜೀವದಾನವು!

* * * *

ಕಣ್ಣಿಲ್ಲದ ಕುರುಡರನ್ನು ಕಂಡರೆ ಕನಿಕರ ಹುಟ್ಟುತ್ತದೆ. ಕಣ್ಣಿದ್ದ ಕುರುಡರನ್ನು ಕಂಡರೆ ಸಿಟ್ಟು ಬರುತ್ತದೆ. ಇವತ್ತೇ ರೇಲ್ವೆ ಗಾಡಿಯಲ್ಲಿ ಬರುವಾಗ್ಗೆ ನಾನು ಕುಳಿತ ಡಬ್ಬಿಯಲ್ಲಿ "೩೬ ಜನರು ಕೂಡ್ರುವದು" ಎಂದು ಪಾಟಿಯು ಇತ್ತು. ಆದರಲ್ಲಿ ಕುಳಿತಿದ್ದರು ೬೨ ಜನರು. ಇಷ್ಟೇ ಅಲ್ಲ.

ಆ ೩೬ ಜನರು ಕೊಡ್ರುವ ಡಬ್ಬಿಯಲ್ಲಿ ೬೨ ಜನರು ಕುಳಿತಿದ್ದರೂ ಇನ್ನೂ ಹತ್ತಿಪ್ಪತ್ತು ಜನರು ಸಹಜವಾಗಿ ಕೊಡ್ರಬಹುದೆಂದು ಹತ್ತುವವರ ತಿಳುವಳಿಕೆ. ಮತ್ತು ಒಳಗೆ ಸ್ಥಳ ಸಂಕೋಚದಿಂದ ಮುದಡಿಕೊಂಡು ಕುಳಿತವರಲ್ಲಿ ಸಹ ಕೆಲವರ ತಿಳುವಳಿಕೆ! ಇಲ್ಲವಾದರೆ ಪ್ರತಿಯೊಂದು ಸ್ಟೇಶನಿನ ಮೇಲೆ ಹಿಂದು ಮುಂದಿನ ಎರಡನೇ ಖಾಲಿ ಡಬ್ಬಿಯಲ್ಲಿ ಹತ್ತಲು ಓಡಾಡುತಲಿದ್ದ ತಮ್ಮ ಪರಿಚಿತರನ್ನು ಏಕೆ ಕರೆಯುತ್ತಿದ್ದರು ?

ಎಷ್ಟೆಂದರೂ ಪರಿಚಿತರು; ಕರೆಯಲಿ. ಕರೆದ ಮೇಲೆ, ಸ್ವತಃ ಸರಿದು ಜಾಗೆ ಕೊಡಬೇಕು. ಬೇಕಾದರೆ ಸ್ವತಃ ಎದ್ದು ನಿಂತು ಜಾಗೆ ಮಾಡಿ ಕೊಡಬೇಕು. ಹಾಗೆ ಮಾಡದೇ ಉಳಿದವರನ್ನು ಸರಿಸಹೋಗುವರು. ಯಾರಾದರೂ ಸರಿಯದಿದ್ದರೆ, "ಯಾರೇನು ಜಾಗೆ ಕಟ್ಟಿಕೊಂಡು ಹೋಗುವದಿಲ್ಲ. ಎಲ್ಲರೂ ತಾಸೆರಡು ತಾಸು ಕುಳಿತು ಇಳಿಯುವದಿದೆ, ಸ್ವಲ್ಪ ಸರಿಯಿರಲ್ಲ" ಎಂದು ಅನ್ನುವರು. ಇಷ್ಟರಲ್ಲಿ ದೂರದಲ್ಲಿ ಮೂಲೆಯಲ್ಲಿ ಕುಳಿತ ಮುದುಕನು "ಜಗತ್ತೀಽ ಹಾಗ ಅದ. ಎಲ್ಲರೂ ಒಂದು ದಿವಸ ಹೋಗುವದು ಅದ." ಎಂದು ಇಹಪರ ಆಧ್ಯಾತ್ಮದ ತತ್ವವನ್ನೇ ಪ್ರಾರಂಭಿಸುವನು.

ಇನ್ನು ವಿಶೇಷವಾಗಿ ವರ್ಣಿಸುವ ಕಾರಣವಿಲ್ಲ. ಮುಂದೆ ಏನು ಮಾಡತಕ್ಕದ್ದು? ಅದನ್ನೂ ನಾನೇ ಸೂಚಿಸುವೆ. ಮೂರನೆಯ ವರ್ಗದ ರೇಲ್ವೆ ಪ್ರವಾಸಿಗಳ ಸಂಘವನ್ನು ಸ್ಥಾಪಿಸಬೇಕು. ಯಾರು ಸ್ಥಾಪಿಸಬೇಕು? ಯಾರು? ಅಂದರೆ ಡಿ. ಎಲ್. ಬಿ. ಅಥವಾ ಮುನಿಸಿಪಾಲಿಟಿ ಅಥವಾ ಯಾವದೇ ಸಂಸ್ಥೆಯ ಅಧ್ಯಕ್ಷಸ್ಥಾನಕ್ಕೆ ಉಮೇದವಾರರಾಗಿ ನಿಂತು ಅಪಜಯ ಹೊಂದಿದವರು ಸ್ಥಾಪಿಸಬೇಕು. ಅದರ ಅಧ್ಯಕ್ಷರಾಗಬೇಕು. ಜನರಲ್ಲಿ ಜಾಗ್ರತೆ ಅಂದರೆ ನಾಲ್ಕು ಜನರು ಕೊಡ್ರುವ ಸೀಟಿನ ಮೇಲೆ ಐನೆಯವನು ಕೊಡ್ರಲಿಚ್ಛಿಸಬಾರದು. ಕೂತವರು ಐನೆಯವನನ್ನು ಕರೆಯಬಾರದು. ಇಷ್ಟೊಂದು ಜಾಗ್ರತೆಯಾದ ಮೇಲೆ ಅಧ್ಯಕ್ಷರು ಆ ಸಂಘವನ್ನು ವಿಘಟಿಸಬೇಕು. ಪುನಃ ಡಿ. ಎಲ್. ಬಿ. ಅಥವಾ ಮ್ಯುನಿಸಿಪಾಲಟಿಯ ಅಧ್ಯಕ್ಷತೆಗೆ

ಪ್ರಯತ್ನಿಸಬೇಕು. ಜಯವು ದೊರೆತರೆ ನೆಟ್ಟಗೆ. ಇಲ್ಲವಾದರೆ ನೋಹಾರ ಪ್ರವಾಸಿಕರ ಸಂಘವನ್ನು ಸ್ಥಾಪಿಸಿ ಅದರ ಅಧ್ಯಕ್ಷರಾಗಬೇಕು.

# ಸ್ವಾಭಿಮಾನ-ರೊಟ್ಟಿಯ ಹೊಡೆದಾಟ-ಗಂಡನ ಶೂರತನ

ತಂದೆಗೆ ತನ್ನ ಮಕ್ಕಳು ಬಲು ಚಂದ! ಚಿತ್ರಕಾರನಿಗೆ ತನ್ನ ಚಿತ್ರಗಳು ಬಹಳ ಸುಂದರ! ಕವಿಗೆ ತನ್ನ ಕವಿತೆಗಳೆ ಬಲು ಪ್ರಿಯ. ಗ್ರಂಥಕರ್ತನಿಗೆ ತನ್ನ ಗ್ರಂಥಗಳು ಮೇಲಾದವು. ಹಾಗೆಯೇ ತಂಗಾಳಿಯ ಅಭಿಮಾನ ನನಗೆ ಬಹಳ. ವರ್ತಮಾನಪತ್ರ ಬಂದ ಕೂಡಲೆ ಪ್ರಥಮತಃ ಹುಡುಕುವದು "ತಂಗಾಳಿ"ಯ ಕಾಲಮ್! ಓದುತ್ತ ನಗುವೆ, ನಗುತ್ತ ಓದುವೆ! ಒಂದೆರಡು ಸಾರೆಯಲ್ಲ, ಅನೇಕ ಸಾರೆ ತಿರುತಿರುಗಿ ಓದುತ್ತೇನೆ. ನನಗೆ ವರ್ತಮಾನಪತ್ರವೆಂದರೆ ತಂಗಾಳಿ! ತಂಗಾಳಿಯೆಂದರೆ ವರ್ತಮಾನಪತ್ರ!!

* * * *

ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡಬಾರದು. ಸಿಟ್ಟಿನಲ್ಲಿದ್ದ ಮನುಷ್ಯನಿಗೆ ತನ್ನ ಕೈಯಲ್ಲಿ ಅಥವಾ ಎದುರಿಗೆ ಏನಿರುವದೆಂಬ ಅರಿವೇ ಇರುವದಿಲ್ಲ. ಕೈಗೆ ಸಿಕ್ಕದ್ದನ್ನು ಬೀಸಿ ಒಗೆಯುವನು. ಕೇವಲ ಕಲ್ಲು, ಕಟ್ಟಿಗೆ ಸಿಕ್ಕರೆ ವಿರೋಧಿಯ ಪುಣ್ಯ! ಯಾಕಂದರೆ ಬಡಿಗೆ-ಕಲ್ಲುಗಳು ಮನುಷ್ಯನಿಂದ ನಿತ್ಯ ಬಡಿದಾಟದಲ್ಲಿ ಉಪಯೋಗಿಸಲ್ಪಡುವ ಸಾಮಾನ್ಯ ಆಯುಧಗಳು!

* * * *

ಜೇಗ್ರೆಡ್ ಜೇಲಿನಲ್ಲಿ ಕೈದಿಗಳಿಗೆ ಕಲ್ಲಿನಷ್ಟು ಬಿರುಸಾದ ರೊಟ್ಟಿಗಳನ್ನು ಕೊಡುತ್ತಿದ್ದರು. ಕೈದಿಗಳು ತಕರಾರು ಮಾಡಿದರೂ ಕೇಳಲಿಲ್ಲ. ಒಮ್ಮೆ ಕೈದಿಗಳು ಊಟಕ್ಕೆ ಕೂತಾಗ ಅವರಿಗೆ ತೀರ ಬಿರಸು ರೊಟ್ಟಿಗಳನ್ನು ಕೊಟ್ಟರು. ಕೈದಿಗಳು ರೊಚ್ಚಿಗೆದ್ದು ರೊಟ್ಟಿಗಳನ್ನೇ ಬೀಸಿ ಅಧಿಕಾರಿಗಳ ಕಡೆಗೆ ಎಸೆದರು! "ಗಾಯ ಮಾಡುವ ಉದ್ದೇಶದಿಂದ ಬಿರಸು ಪದಾರ್ಥ

ಗಳನ್ನು ಒಗೆದರು" ಎಂದು ಅಧಿಕಾರಿಗಳು ಕೈದಿಗಳ ಮೇಲೆ ಆರೋಪ ಇಡುವಂತಿದ್ದಿಲ್ಲ. ಯಾಕಂದರೆ ರೊಟ್ಟಿಗಳು ಬಿರಸು ಇದ್ದವೆಂದು ತಾವೇ ಒಪ್ಪಿದಂತಾಗುತ್ತಿತ್ತು.

ರೊಟ್ಟಿಯಿಂದ ಹೊಡೆದ ಈ ಪ್ರಸಂಗವೇನೂ ಹೊಸದಲ್ಲ. ನಮ್ಮಲ್ಲಿ ಅತ್ತೆಯು ಸಿಟ್ಟಾಗಿ ಸೊಸಿಗೆ ರೊಟ್ಟಿಯಿಂದ ಹೊಡೆದದ್ದನ್ನು ಕೇಳಿರಬಹುದು. ಅಥವಾ ಸೊಸಿಯು ಅತ್ತೆಗೆ ಹೊಡೆದಿರಬಹುದು. ಗಂಡನು ಹೆಂಡತಿಗಾಗಲಿ ಅಥವಾ ದಿಟ್ಟ ಹೆಂಡತಿಯು ಗಂಡನಿಗಾಗಲಿ ಹೊಡೆದಿರಬಹುದು!

* * * *

ಒಮ್ಮೆ ಹೆಂಡತಿಯನ್ನು ಹೊಡೆದ ಆರೋಪದ ಮೇಲೆ ಗಂಡನನ್ನು ಕೋರ್ಟಿಗೆ ಎಳೆದರು. ಹೊಡೆದ ಕಾರಣವೇನೆಂದು ನ್ಯಾಯಾಧೀಶನು ಆರೋಪಿಯ(ಗಂಡನ)ನ್ನು ವಿಚಾರಿಸಿದನು. ಆಗ ಗಂಡನು ಸಮರ್ಥಿಸಿಕೊಂಡ: 'ನನ್ನ ಹೆಂಡತಿಯು ನನ್ನನ್ನು ಬಹಳವಾಗಿ ಪೀಡಿಸುತ್ತಿದ್ದಳು. ಆದರೆ ಸೇಡು ತೀರಿಸಿಕೊಳ್ಳುವ ಸಮಯವು ಇಲ್ಲಿಯ ವರೆಗೆ ದೊರೆತಿದ್ದಿಲ್ಲ. ಇಂದು ಅವಳ ಕೈಯಲ್ಲಿ ಏನೂ ಇದ್ದಿಲ್ಲ. ಅವಳ ಸಮೀಪದಲ್ಲಿ ಬಡಿಗೆ, ಕಲ್ಲು, ಮುಂತಾದ ಯಾವ ವಸ್ತುವೂ ಇದ್ದಿಲ್ಲ. ಅಕಸ್ಮಾತ್ ನನ್ನ ಕಡೆಗೆ ಬೆನ್ನುಮಾಡಿ ನಿಂತಿದ್ದಳು. ನಾನು ಅರಿವೆ ತೊಟ್ಟುಕೊಂಡು ಹೊರಗೆ ಹೋಗುವ ಸಿದ್ಧತೆಯಲ್ಲಿದ್ದೆನು. ಮುಂದಿನ ಬಾಗಿಲವು ತೆರೆದಿತ್ತು. ಇದೇ ಸಮಯವೆಂದು ಸಾಧಿಸಿ ಬೆನ್ನಮೇಲೆ ಒಂದು ಏಟು ಕೊಟ್ಟವನೇ ಹೊರಗೆ ಓಡಿ ಹೋದೆ."

ಮತ್ತೊಮ್ಮೆ ಒಬ್ಬ ಕಳ್ಳನು ಒಂದು ಮನೆಯನ್ನು ಹೊಕ್ಕನು. ಮನೆಯ ಯಜಮಾನನು ಮನೆಯಲ್ಲಿದ್ದಿಲ್ಲ. ಅವನ ಹೆಂಡತಿಯು ಕಳ್ಳನನ್ನು ನೋಡಿ, "ಸುಮ್ಮನೆ ಹೊರಗೆ ಹೋಗುವೆಯೋ ಅಥವಾ ನನ್ನ ಗಂಡನನ್ನು ಕರೆಯಲೋ?" ಎಂದು ಅಂದಳು. ಆಗ ಕಳ್ಳನು ಅಂದ: "ನಿನ್ನ ಗಂಡನು ಎಷ್ಟು ಶೂರನಿರುವನೆಂಬದು ನನಗೆ ಗೊತ್ತಿದೆ. ನಿನ್ನೆ ನಾನು ಬಂದಾಗ ಅವನು ಮನೆಯಲ್ಲಿದ್ದನು, ನೀನು ಮನೆಯಲ್ಲಿದ್ದಿಲ್ಲ. ಆಗ ನನಗೆ 'ಹೊರಗೆ

ಹೋಗುವಿಯೋ ಅಥವಾ ನನ್ನ ಹೆಂಡತಿಯನ್ನು ಕರೆಯಲೋ' ಎಂದು ಅಂದಿದ್ದನು."

# ಪೌರುಷ-ಜಾದು

ತಮ್ಮನ್ನು ತಾವೇ ಹೊಗಳಿಕೊಳ್ಳುವದು ಕೆಲವರಿಗೆ ಸೇರುತ್ತದೆ. ಎರಡನೇಯವರನ್ನು ಹೊಗಳುವದು ಕೆಲವರ ರೀತಿ. ಎರಡನೇಯವರು ತಮ್ಮನ್ನು ಹೊಗಳಬೇಕೆಂದು ಕೆಲವರ ಇಚ್ಛೆ. ಈ ಮೂರು ತರಗತಿಯ ಜನರಲ್ಲಿ ತೀರ ಕನಿಷ್ಠರಾರೆಂಬುದನ್ನು ಹೇಳುವಷ್ಟು ಜಾಣನಿದ್ದೇನೆಂದು ನಾನು ಸ್ವತಃ ನನ್ನನ್ನು ಹೊಗಳಿಕೊಳ್ಳುವದಿಲ್ಲ!

* * * *

ಯಾರು ತೀರ ಕನಿಷ್ಠರೆಂಬದನ್ನು ವಿಚಾರಿಸಹತ್ತಿದರೆ ಮೊದಲು ಎಲ್ಲರೂ ಕನಿಷ್ಠರೆಂದು ಒಪ್ಪಿದಂತಾಗುತ್ತದೆ. ಆ ಮೇಲೆ ಅದರಲ್ಲಿ ಕನಿಷ್ಠರಾರು? ಹೆಚ್ಚು ಕನಿಷ್ಠರು ಯಾರು? ತೀರ ಕನಿಷ್ಠರು ಯಾರು? ಎಂಬವನು ನಿರ್ಣಯಿಸಬೇಕಾಗುತ್ತದೆ. ಇದನ್ನು ವಾಚಕವೃಂದವೇ ನಿರ್ಣಯಿಸಲಿ. ವಾಚಕರು ಇಷ್ಟು ಜಾಣರಿರುವರೆಂದು ಹೊಗಳಲು ಸಿದ್ಧನಿದ್ದೇನೆ!

*

ಆದರೆ ನನಗಾದರೂ ನನ್ನ ಪ್ರಾಮಾಣಿಕ ಅಭಿಪ್ರಾಯವನ್ನು ವ್ಯಕ್ತ ಪಡಿಸಲು ಅಡ್ಡಿ ಏನಿದೆ? ಅಂದರೆ ಉಳಿದ ಸಮಯದಲ್ಲಿ ಅಪ್ರಾಮಾಣಿಕ ಅಭಿಪ್ರಾಯ ಕೊಡುತ್ತೇನಂತಲ್ಲ. ಹೀಗೆ ಅನ್ನುವ ರೂಢಿ. ವಿಶೇಷತಃ ಅಪ್ರಾಮಾಣಿಕ ಅಭಿಪ್ರಾಯವನ್ನು ಕೊಡುವಾಗ ಅದಕ್ಕೆ ಪ್ರಾಮಾಣಿಕ ಮತವೆಂದು ಒತ್ತಿ ಹೇಳುವದು ರೂಢಿ!

* * * *

ಅದೇನೇ ಇರಲಿ. ನನ್ನ ಪ್ರಾಮಾಣಿಕ ಅಭಿಪ್ರಾಯವು ಹೀಗೆ ಇರುತ್ತದೆ: ಮೇಲೆ ಕಾಣಿಸಿದ ಮೂರು ಗುಣಗಳು (ದುರ್ಗುಣಗಳು) ಇರುವವನು ಅಂದರೆ

ಸ್ವತಃ ಹೊಗಳಿಕೊಂಡು, ಎರಡನೆಯುವರನ್ನು ಹೊಗಳಿ, ಎರಡನೆಯುವರು ತನ್ನನ್ನು ಹೊಗಳಬೇಕೆಂದು ಬಯಸುವವನು ತೀರ ಕನಿಷ್ಠ !!

* * * *

ಇದ್ದದ್ದನ್ನು ಇಲ್ಲದಂತೆ ಮಾಡುವದಕ್ಕೆ ಜಾದು ಅನ್ನುತ್ತಾರೆ. ಇಲ್ಲದಲ್ಲಿ ಇರುವಂತೆ ಮಾಡುವದೂ ಜಾದು. ಆದರೆ ಒಂದೇ ವೇಳೆಯಲ್ಲಿ ಇದ್ದಲ್ಲಿ ಇಲ್ಲದಂತೆ ಮಾಡಿ, ಇಲ್ಲದಲ್ಲಿ ಇರುವಂತೆ ಮಾಡಿದರೆ ಅದು "ಡಬ್ಬಲ್ ಜಾದು".

* * * *

ಒಮ್ಮೆ ಒಂದು ಮೇಜವಾನಿಯಲ್ಲಿ ಸುಗ್ರಾಸ ಭೋಜನವಾದ ನಂತರ ಎಲ್ಲರೂ ಹರಟೆ ಹೊಡೆಯುತ್ತ ಕುಳಿತಿದ್ದರು. ಊರಿದ್ದಲ್ಲಿ ಹೊರಗೇರಿ ಇರುವದೇ! ಕುಳಿತ ಮಂಡಳಿಯಲ್ಲಿ ಒಬ್ಬಿಬ್ಬರು ತುಡುಗರಿದ್ದರು. ಎದುರಿಗೆ ಇದ್ದ ಬೆಳ್ಳಿಯ ತಬಕ, ಪಾತ್ರೆ, ವಾಟೆ, ಚಮಚೆಗಳಲ್ಲಿ ಏನಾದರೂ ಒಂದನ್ನು ನೆಗವಬೇಕೆಂದು ಅಪೇಕ್ಷಿಸುತ್ತಿದ್ದ ಒಬ್ಬ ತುಡುಗನು ಮೆಲ್ಲಗೆ ಒಂದು ಬೆಳ್ಳಿಯ ಚಮಚೆಯನ್ನು ಎತ್ತಿ ತನ್ನ ಬೂಟಿನಲ್ಲಿ ಸೇರಿಸಿದನು. ಸಮಯ ಸಾಧಿಸುತ್ತಿದ್ದ ಮತ್ತೊಬ್ಬ ತುಡುಗನು ಇದನ್ನು ನೋಡಿದನು. ಮತ್ತೊಂಧು ಚಮಚೆಯನ್ನು ತಾನು ಕದಿಯುವದು ಅವನಿಗೆ ಕಠಿಣವಾಯಿತು. ತಟ್ಟನೆ ಖುರ್ಚಿಯ ಮೇಲೆ ಎದ್ದುನಿಂತು ಆತ ಸಾರಿದ: "ಸಭ್ಯಗೃಹಸ್ಥರೆ, ನಾನು ಸ್ವಲ್ಪ ಜಾದುವಿನ ಕೆಲಸ ಮಾಡಿ ತೋರಿಸುತ್ತೇನೆ. ನಿಮ್ಮೆದುರಿಗೆ ನಾನು ಒಂದು ಬೆಳ್ಳಿಯ ಚಮಚೆಯನ್ನು ನನ್ನ ಕಿಸೆಯಲ್ಲಿ ಇಡುವೆ. ಅದನ್ನು ನಿಮ್ಮಲ್ಲಿ ಒಬ್ಬರ ಬೂಟಿನೊಳಗಿನಿಂದ ತೆಗೆಯುವೆ" ಹೀಗೆ ಅಂದು ಒಂದು ಬೆಳ್ಳಿಯ ಚಮಚೆಯನ್ನು ಕಿಸೆಯಲ್ಲಿ ಹಾಕಿದನು. ಆ ಮೇಲೆ ಅತ್ತಿತ್ತ ಸುಳಿದಾಡಿದಂತೆ ಮಾಡಿ, ಮೊದಲನೆಯ ಕಳ್ಳನ ಹತ್ತರ ಬಂದು, ಅವನ ಬೂಟಿನಿಂದ ಚಮಚೆಯನ್ನು ತೆಗೆದನು. ಎಲ್ಲರೂ ಬಿದ್ದುಬಿದ್ದು ನಕ್ಕರು. ಮೊದಲನೆಯ ಕಳ್ಳನೂ ನಕ್ಕನು!! ಎರಡನೆಯ ಕಳ್ಳನು ಮೀಸೆ ಹುರಿ ಹಾಕುತ್ತ ಕಿಸೆಯಲ್ಲಿಯ ಚಮಚೆಯೊಡನೆ ಹೊರಟು ಹೋದನು!



# ಸುಳ್ಳುಹೇಳುವ ಕಲೆ – ಡಬ್ಬಲ್ ಜಾದು

ಸುಳ್ಳು ಹೇಳುವದೊಂದು ಕಲೆ. ಬಹಳ ಪುರಾತನವಾದುದು. ಪುರಾತನ ವಸ್ತುಗಳಲ್ಲಿ ಅಭಿಮಾನಪಡುವ ನಾವು ಈ ಕಲೆಯ ವಿಷಯವಾಗಿಯೂ ಅಭಿಮಾನಪಡಬೇಕು!

*　　　　*　　　　*　　　　*

ಈ ಕಲೆಯು ಜಗತ್ತಿನಲ್ಲಿ ಅದೃಶ್ಯವಾಗಿಲ್ಲ; ಇದು ನಮ್ಮ ಸುದೈವ. ಇನ್ನೂ ಈ ಕಲೆಯಲ್ಲಿ ಪರಿಣತರಾದವರು ಜಗತ್ತಿನಲ್ಲಿ ಇರುವರು; ಇದು ನಮ್ಮ ಭಾಗ್ಯವು. ಸದ್ಯಕ್ಕೆ ಸುಳ್ಳಿಗೆ ಬೇರೆ ಬೇರೆ ಹೆಸರುಗಳಿವೆ: ಸುಳ್ಳು, ಖೊಟ್ಟಿ, ಗಪ್ಪಾ, ಗುಳಿಗೆ, ಅಸತ್ಯ, ಚಾಣಕ್ಯತನ ಮೊದಲಾದವುಗಳು.

*　　　　*　　　　*　　　　*

ಕತ್ತಲೆಯಿಂದ ಬೆಳಕಿಗೆ ಮಹತ್ವ; ಕುರೂಪಿಗಳಿಂದ ಚಲುವರಿಗೆ ಮಹತ್ವ; ಹಾಗೆಯೇ ಸುಳ್ಳಿನಿಂದ ಸತ್ಯಕ್ಕೆ ಮಹತ್ವ! ಆದ್ದರಿಂದ ಸತ್ಯದ ತೇಜವು ಪ್ರಜ್ವಲಿಸಬೇಕಾದರೆ ಸುಳ್ಳಿನ ಕತ್ತಲೆಯು ಬೇಕೇಬೇಕು. ಸತ್ಯದ ಸೌಂದರ್ಯವು ಪ್ರತ್ಯಕ್ಷವಾಗಬೇಕಾದರೆ ಸುಳ್ಳಿನ ಕುರೂಪವು ಗೋಚರವಾಗ ಬೇಕು. "ಸತ್ಯಕ್ಕೆ ಸಾವಿಲ್ಲ" ಎಂಬದೊಂದು ನಾಣ್ಣುಡಿಯು. ಆದರೆ ಸತ್ಯಕ್ಕೆ ಇಷ್ಟೊಂದು ಸುಳ್ಳಿನ ಅವಶ್ಯಕತೆ ಇದ್ದಮೇಲೆ ಸುಳ್ಳಿಗೂ ಸಾವು ಬೇಡ! ಸುಳ್ಳು ಅಮರವಾಗಿರಲಿ!

*

ಅಮೇರಿಕೆಯ ಪ್ರಸಿದ್ಧ ವಿನೋದಿ ಗ್ರಂಥಕರ್ತನಾದ **ಮಾರ್ಕ್ ಟ್ವೇನ್**ನು ತನ್ನದೊಂದು ಪುಸ್ತಕದಲ್ಲಿ "ಸತ್ಯವು ಅಮೌಲ್ಯವಾದ ವಸ್ತುವು; ಆದ್ದರಿಂದ ಅದನ್ನು ಮಿತಿಯಿಂದ ಉಪಯೋಗಿಸಿರಿ. ನಿರರ್ಥಕವಾಗಿ ಸುಳ್ಳು ಹೇಳಬೇಡಿರಿ. ಅದೇ ಸುಳ್ಳು ಮತ್ತೊಂದು ಸಮಯದಲ್ಲಿ ಉಪಯೋಗ ಬೀಳಬಹುದು!" ಎಂದು ಉಪದೇಶಿಸಿರುವನು.

"ಸುಳ್ಳು" ಈ ಶಬ್ದಕ್ಕಿಂತ "ಅಸತ್ಯ" ಈ ಶಬ್ದವು ಹೆಚ್ಚು ಸೌಜನ್ಯ ಸೂಚಕವಿದೆ. ಅಂದರೆ ಸಜ್ಜನರು ಹೇಳುವದು ಸುಳ್ಳು ಎಂದಲ್ಲ. ಇಂಗ್ಲೀಷ ಶಬ್ದಗಳಲ್ಲಿ ಹೇಳಬೇಕಾದರೆ "ಅಸತ್ಯ" (un-true) ಶಬ್ದವು ಪಾರ್ಲಮೆಂಟರಿ (Parliamentary) ಶಬ್ದವಿರುತ್ತದೆ. ನಮ್ಮ ಮುಂಬೈ ಅಸೆಂಬ್ಲಿಯಲ್ಲಿ ಒಬ್ಬ ಸದಸ್ಯನು ಮತ್ತೊಬ್ಬನಿಗೆ "ನೀವು ಸುಳ್ಳು ಹೇಳಿದಿರಿ" ಅಥವಾ "ನೀವು ಗುಳಿಗಿ ಉಳ್ಳಿಸಿದಿರಿ" ಎಂದು ಅನ್ನಕೂಡದು. ಅದೇ "ನೀವು ಅಸತ್ಯ ನುಡಿದಿರಿ" ಎಂದು ಅಂದರೆ ಅಡ್ಡಿ ಇಲ್ಲ! ಇದರಿಂದ ಅಸೆಂಬ್ಲಿ ಮೆಂಬರರು ಅಸತ್ಯ ನುಡಿಯಲು ಅಡ್ಡಿ ಇಲ್ಲ ಎಂದು ಮಾತ್ರ ತಿಳಿಯಕೂಡದು.

ಒಂದೇ ವೇಳೆಯಲ್ಲಿ ಇದ್ದಲ್ಲಿ ಇಲ್ಲದಂತೆ ಮಾಡಿ, ಇಲ್ಲದಲ್ಲಿ ಇರುವಂತೆ ಮಾಡುವದು ಡಬ್ಬಲ್ ಜಾದು ಎಂದು ಹಿಂದೆ ಹೇಳಲಿಲ್ಲವೇ? ಅದರ ಬೇರೊಂದು ಉದಾಹರಣೆಯನ್ನು ಇಲ್ಲಿ ಕೆಳಗೆ ಕೊಟ್ಟಿದ್ದೇನೆ. ಇದು ನಿಜವಾಗಿ ಜರುಗಿದ ಸಂಗತಿ. ಸುಳ್ಳು ಅಥವಾ ಗಫಾ ಎಂದು ತಿಳಿಯಕೂಡದು. ಅಥವಾ ಪಾರ್ಲಮೆಂಟರಿ ಭಾಷೆಯಲ್ಲಿ "ಅಸತ್ಯ"ವೆಂದೂ ತಿಳಿಯಕೂಡದು!

* * * *

ನಮ್ಮ ಮನೆಯ ತುಂಬ ಹೆಗ್ಗಣವು ಗುದ್ದು ತೋಡಿ ಗೋಡೆಗಳನ್ನು ಪೊಳ್ಳು ಮಾಡಿದ್ದನ್ನು ನಿನ್ನೆ ತಾನೇ ನೋಡಿದೆ. ನಾನು ನೋಡುನೋಡುವಷ್ಟರಲ್ಲಿ ಒಂದು ಗುದ್ದಿನೊಳಗಿಂದ ಒಂದು ಇಲಿಯು ಹೊರಬಿತ್ತು. ಕೂಡಲೆ ನಮ್ಮ ಬೆಕ್ಕಿನ ಮರಿಯು ಬೆನ್ನುಹತ್ತಿತು. ಇಲಿಯು ಲಗುಬಗೆಯಿಂದ ಒಂದು ದೊಡ್ಡ ಗುದ್ದನ್ನು ಹೊಕ್ಕಿತು. ಅದರ ಹಿಂದೆ ಬೆಕ್ಕಿನ ಮರಿಯೂ ಆ ಗುದ್ದಿನಲ್ಲಿ ಹೋಗೇ ಬಿಟ್ಟಿತು. ಬಹಳ ಹೊತ್ತಿನ ವರೆಗೆ ಹೊರಗೆ ಬರಲಿಲ್ಲ. ಗುದ್ದಿನ ಬಾಯಲ್ಲಿ ಹಣಿಕಿ ಹಾಕಿ ನಾನು ಬಹಳ ಪರಿಯಾಗಿ ಬೆಕ್ಕಿನ ಮರಿಯನ್ನು ಕರೆದೆನು. "ಮ್ಯಾಂವು! ಮ್ಯಾಂವು!" ಎಂದು ಸ್ವರ ತೆಗೆದೆನು. ಕಡೆಗೆ ಬೆಕ್ಕಿನ ಮರಿಯ ತಾಯಿಯನ್ನು ತಂದು ಒದರಹಚ್ಚಿದೆನು. ಗುದ್ದಿನೊಳಗೆ ಹೋದ ಬೆಕ್ಕಿನ ಮರಿಯೇನೂ ಹೊರಗೆ ಬರಲಿಲ್ಲ. ಕಡೆಗೆ ಬೇಸತ್ತು ಬೆಕ್ಕಿನ ಮರಿಯ ಆಶೆಯನ್ನೇ ಬಿಟ್ಟುಕೊಟ್ಟೆ. ಮನೆಯ ಹೊರಗೆ ಬಂದೆ. ಅದೇ ಬೆಕ್ಕಿನ ಮರಿಯು ದಾರಿಯಲ್ಲಿ ಚಿನ್ನಾಟಿ ಆಡುತ್ತಿತ್ತು!! ಆಶ್ಚರ್ಯ

ಚಕಿತನಾದೆ. ಆತುರದಿಂದ ಮರಿಯನ್ನು ಕೈಯಲ್ಲಿ ತೆಗೆದುಕೊಂಡು ಮುದ್ದಿಟ್ಟೆ. ಇಲಿಯ ಹಣೆಯಬರಹವನ್ನು ಯಾರು ಬಲ್ಲರು ?

# ಕಪ್ಪು ಬಣ್ಣದವರು — ದೊಡ್ಡವರ ಮೇಲೆ ಪ್ರೀತಿ

ಬೇಸಿಗೆ ಬಂದ ಹಾಗೆಲ್ಲ ಜನರು ತಂಗಾಳಿಯ ಸಲುವಾಗಿ ಬಾಯಿ ತೆಗೆದುಕೊಂಡು ಕೂಡ್ರುವರು. ಬಿಸಿಲು ಬಲಿತಂತೆ ಮನೆಯೊಳಗಿಂದ ಹೊರಗೆ ಬಂದು ಬಂಕದಲ್ಲಿ ಕುಳಿತುಕೊಳ್ಳುವರು. ಹೊರಗೆ ಕುಳಿತವರು ಸಮೀಪದ ಗಿಡಕ್ಕೆ ಹೋಗುವರು. ಶ್ರೀಮಂತರು ಮಹಾಬಳೇಶ್ವರ, ಊಟಕಮಾಂಡ ಸಿಮ್ಲಾ ಮುಂತಾದವುಗಳಿಗೆ ಹೋಗುವರು. ಬಡವರು ವರ್ತಮಾನಪತ್ರದಲ್ಲಿ **ತಂಗಾಳಿ**ಯನ್ನು ಓದುವರು!

* * * *

ಕಪ್ಪು ಬಣ್ಣದವರೆಲ್ಲ ಕುರೂಪಿಗಳಲ್ಲ, ಕೆಂಪು ಬಣ್ಣದವರೆಲ್ಲ ಸುರೂಪಿಗಳೂ ಅಲ್ಲ. ಹಾಗೆ ಇದ್ದದ್ದಾದರೆ ಶೀತ ಪ್ರದೇಶದಲ್ಲಿರುವ ಬಿಳಿಯ ಬಣ್ಣದವರ ಶಬ್ದಕೋಶದಲ್ಲಿ "ಕುರೂಪಿ" ಎಂಬ ಶಬ್ದವೇ ಇರಬಾರದಾಗಿತ್ತು. ಅದರಂತೆ ಉಷ್ಣಕಟಿಬಂಧದಲ್ಲಿ ಇರುವ ಕಪ್ಪು ಜನರ ಶಬ್ದಕೋಶದಲ್ಲಿ "ಸುಂದರ" ಎಂಬ ಶಬ್ದವೂ ಇರಬಾರದು.

ಬಣ್ಣದವರನ್ನು ಕಂಡರೆ ನಗುವರು. ಆದರೆ ಇದರಲ್ಲಿ ಬಣ್ಣದವರದು ಏನು ತಪ್ಪು? ಕೆಂಪು ಬಣ್ಣದವರನ್ನು ಕಂಡರೆ ತಾವು ನಗದಿರುವದೇ ಅವರ ತಪ್ಪು! ಸದಾ ಸರ್ವರಿಗೂ ಉಪಯೋಗ ಬೀಳುವ ಕಬ್ಬಿಣವು ಕಪ್ಪು; ನಿತ್ಯ ರೊಟ್ಟಿಯನ್ನು ಬೇಯಿಸಿ ಕೊಡುವ ಹಂಚು ಕಪ್ಪು; ಮಸಿಯು ಕಪ್ಪು; ಚಹಾ ಪುಡಿ ಕಪ್ಪು. ಚಹಾ ಕುಡಿಯುವ ಬಟ್ಟಲದ ಬಣ್ಣವು ಬಿಳಿಯ

ವಾದರೂ ಹೆಸರು ಕಪ್ಪು. ಹೀಗೆ ಕಪ್ಪು ಅಭಿಮಾನಾಸ್ಪದವಾಗಿರುವದೇ ಹೊರತು ತಿರಸ್ಕರಣೀಯವಾಗಿರುವದಿಲ್ಲ.

*

ಮಿ. ಲಾಯಿಡ ಜಾರ್ಜರು ಜಗತ್ತಿನ ರಾಜಕಾರಣ ಚತುರರಲ್ಲಿ ಶ್ರೇಷ್ಠರೆಂದು ಎಣಿಸಲ್ಪಡುತ್ತಾರೆ. ಇವರು ೧೯೧೨ನೆಯ ಇಸ್ವಿಯಲ್ಲಿ ಇಂಗ್ಲಂಡಿನ ಹಣಕಾಸಿನ ಮಂತ್ರಿಗಳಾಗಿದ್ದಾಗ ಇವರ ಹತ್ತರ ಒಬ್ಬ ತರುಣನು ಬಂದನು. ಬರ್ಫದಿಂದ ಬಿಗಿದ ಹಿಮಸಾಗರದ ಮಧ್ಯದಲ್ಲಿ ಉತ್ತರ ಧ್ರುವಬಿಂದುವಿನ ಮೇಲೆ ಇಂಗ್ಲಂಡದ ನಿಶಾನಿಯನ್ನು ಹಚ್ಚಬೇಕೆಂಬುದು ಇವನ ಸಾಹಸದ ಮಹತ್ವಾಕಾಂಕ್ಷೆ. ಇದಕ್ಕಾಗಿ ಲಾಯಿಡ ಜಾರ್ಜರಿಂದ ಧನಸಹಾಯ ಕೇಳಿದನು. ಆಗ ಲಾಯಿಡ ಜಾರ್ಜರು ಒಂದು ಪತ್ರವನ್ನು ಬರೆದು ಕೊಟ್ಟು ಆ ತರುಣನನ್ನು ತಮ್ಮೊಬ್ಬ ಶ್ರೀಮಂತ ಮಿತ್ರನ ಕಡೆಗೆ ಕಳಿಸಿದರು. ಆ ಶ್ರೀಮಂತನು ತರುಣನಿಗೆ ಅಂದದ್ದು, "ತಮ್ಮಾ, ನೀನು ಒಬ್ಬನೇ ಉತ್ತರ ಧ್ರುವಬಿಂದುವಿಗೆ ಹೋಗುವಿಯಾದರೆ ನಿನಗೆ ೧೦ ಸಾವಿರ ಪೌಂಡು ಕೊಡುವೆನು. ಲಾಯಿಡ ಜಾರ್ಜರನ್ನೂ ನಿನ್ನ ಸಂಗಡ ಒಯ್ಯುವಿಯಾದರೆ, ನಿನಗೆ ೫೦ ಸಾವಿರ ಪೌಂಡು ಕೊಡುವೆನು. ಲಾಯಿಡ ಜಾರ್ಜರನ್ನು ಬರ್ಫದಲ್ಲಿ ಬಿಟ್ಟು ಒಬ್ಬನೇ ತಿರುಗಿ ಬರುವಿಯಾದರೆ, ಒಂದು ಲಕ್ಷ ಪೌಂಡು ಕೊಡುವೆನು !"

* * * *

ಜರ್ಮನಿಯ ನಾಜಿ ಸರ್ವಾಧಿಕಾರಿಯಾಗಿದ್ದ ಹಿಟ್ಲರನು ಯಹೂದಿ ಜನರನ್ನು ಜರ್ಮನಿಯಿಂದ ಹೊರಗೆ ಹಾಕಲು ಪ್ರಾರಂಭಿಸಿದಂದಿನಿಂದ ಯಹೂದಿ ಜನರು ಅವನ ವೈರಿಗಳಾದರು. ಒಮ್ಮೆ ಎರಡು ರಾಜಮಾರ್ಗಗಳು ಕೂಡಿದ ಚೌಕಿನ ಕಡೆಗೆ ಒಂದೊಂದು ಮಾರ್ಗದಿಂದ ಒಂದೊಂದು ಮೋಟರ ಕಾರು ಅತಿ ವೇಗದಿಂದ ಬರುತ್ತಿದ್ದವು. ಹಾಗೆಯೇ ಬಂದಿದ್ದರೆ ದುರ್ಘಟನೆಯಾಗಿ ಅನಾಹುತವಾಗುವ ಸಂಭವವಿತ್ತು. ಅಲ್ಲಿಯೇ ನಿಂತಿದ್ದ ಯಹೂದಿ ಹುಡುಗನೊಬ್ಬನು, ತಟ್ಟನೆ ಚೌಕಿನ ಮಧ್ಯದಲ್ಲಿ ಪೋಲಿಸ ಸಿಪಾಯಿಯಂತೆ ನಿಂತು, ಒಂದು ಮೋಟರಿಗೆ ಹೋಗಲಿಕ್ಕೂ ಮತ್ತೊಂದು ಮೋಟರಿಗೆ ನಿಲ್ಲಲಿಕ್ಕೂ ಸನ್ನೆಮಾಡಿದನು. ನಿಂತ ಗಾಡಿಯಲ್ಲಿದ್ದ ಹಿಟ್ಲರನು ಬಹಳ

ಸಂತುಷ್ಟನಾದನು. ಆ ಹುಡುಗನನ್ನು ಕರೆದು ಹಿಟ್ಲರನು ಎಂದ: "ನೀನು ಇಂದು ಜರ್ಮನಿಯ ಸರ್ವಾಧಿಕಾರಿಯಾದ ಹಿಟ್ಲರನನ್ನು ಉಳಿಸಿರುವಿ. ಏನು ಬೇಡುವಿ ಬೇಡು." ಒಂದು ಕ್ಷಣಹೊತ್ತು ವಿಚಾರಿಸಿ ತಲೆ ತುರಿಸುತ್ತ ಆ ಯಹೂದಿ ಹುಡುಗನು ಹೀಗೆ ಅಂದನು: "ನಾನು ನಿಮ್ಮನ್ನು ಉಳಿಸಿದ ಸಂಗತಿಯನ್ನು ಅಪ್ಪನಿಗೆ ಹೇಳಬೇಡಿರಿ. ಇಷ್ಟೇ ಸಾಕು!"

# ವರ್ತಮಾನಪತ್ರಗಳ ಸುದ್ದಿಗಾರರು

ವರ್ತಮಾನಪತ್ರಗಳ ಸುದ್ದಿಗಾರರ ಕರ್ತವ್ಯವು ಸುದ್ದಿ ಕೂಡಿಸುವದು; ಸುದ್ದಿ ಸಿಗದಿದ್ದರೆ ಸುದ್ದಿ ಹುಟ್ಟಿಸುವದು. ಸುಳ್ಳು ಸುದ್ದಿಯನ್ನು ಸತ್ಯವಿದ್ದಂತೆ ಮಾಡಿ ತೋರಿಸುವವನು ಚತುರನಾದ ಸುದ್ದಿಗಾರನು!

* * * *

೧೯೩೧ನೇ ಇಸ್ವಿಯಲ್ಲಿ ಮುಂಬೈಯಲ್ಲಿ ಅ. ಭಾ. ಕಾಂಗ್ರೆಸ ಕಮೀಟಿಯು ಕೂಡಿತ್ತು. ಕಮೀಟಿಯ ಕಾರ್ಯಕ್ರಮದಲ್ಲಿ ಬಹಳ ಮಹತ್ವದ ವಿಷಯಗಳು ಚರ್ಚೆಗೆ ಬರಲಿದ್ದವು. ಆದ್ದರಿಂದ ಎಲ್ಲ ಸದಸ್ಯರು ಚರ್ಚೆಯ ವಿಷಯವನ್ನು ಗೌಪ್ಯವಾಗಿ ಇಡುವದಾಗಿಯೂ ಏನನ್ನೂ ಹೊರಗೆ ಹಾಕದಂತೆ ದಕ್ಷತೆ ವಹಿಸುವದಾಗಿಯೂ ಪ್ರಮಾಣ ಮಾಡಿದ್ದರು. ಎರಡು ದಿವಸಗಳ ವರೆಗೆ ಹೊರಗೆ ಕುಳಿತ ಸುದ್ದಿಗಾರರಿಗೆ ಯಾವ ಸುದ್ದಿಯೂ ಸಿಗಲಿಲ್ಲ. ಆಗ ಎಲ್ಲ ಸುದ್ದಿಗಾರರು ಕೂಡಿ ಕುಳಿತು ತಾವೇ ಸುದ್ದಿಗಳನ್ನು ಹುಟ್ಟಿಸಿದರು. ಮರು ದಿವಸ ಎಲ್ಲ ಪತ್ರಗಳಲ್ಲಿ ದೊಡ್ಡ ಅಕ್ಷರಗಳಲ್ಲಿ ಕೆಳಗಿನ ಸುದ್ದಿಗಳು ಪ್ರಸಿದ್ಧವಾದವು:

೧. ಮ. ಗಾಂಧಿಯವರು ದುಂಡುಮೇಜಿನ ಪರಿಷತ್ತಿಗೆ ಹೋಗುವದಿಲ್ಲ.

೨. ಕಾಯಿದೆಭಂಗ ಚಳವಳಿಯು ಪುನಃ ಪ್ರಾರಂಭ.

೩. ಮ. ಗಾಂಧಿಯವರನ್ನು ಪುನಃ ಕೈದು ಮಾಡುವರೋ?

೪. ಹಿಂದು-ಮುಸ್ಲಿಮ್ ಐಕ್ಯದ ಪ್ರಯತ್ನಗಳು ಸಫಲವಾಗಲಿಲ್ಲ.

ಜಗತ್ತೇ ದಿಗ್ಭ್ರಾಂತವಾಯಿತು!

ಮರುದಿವಸ ಪುನಃ ಕಮೀಟಿಯು ಪ್ರಾರಂಭವಾದ ಕೂಡಲೆ ಎಲ್ಲ ಸುದ್ದಿಗಾರರು ಮ. ಗಾಂಧಿಯವರಿಗೆ ಅರ್ಜಿಯನ್ನು ಕಳಿಸಿ ಆ ದಿವಸ ಮುಂಜಾನೆ ಪ್ರಸಿದ್ಧವಾದ ಸುದ್ದಿಗಳು ನಿಜವೋ ಎಂದು ಕೇಳಿದರು. ಆ ಅರ್ಜಿಯ ಮೇಲೆ ಮ. ಗಾಂಧಿಯವರು ಕೆಳಗಿನ ಒಂದೇ ವಾಕ್ಯವನ್ನು ಬರೆದು ತಿರುಗಿ ಕಳಿಸಿದರು:

"ಸರತಿಗೆ ಒಂದೊಂದೇ ಸುದ್ದಿಯನ್ನು ಹುಟ್ಟಿಸಿರಿ. ಮೋ. ಕ. ಗಾ."

"One sensation at a time, please! M. K. G."

* * * *

ಯಾರಾದರೂ ಭಾಷಣ ಮಾಡಿದರೆ ಸುದ್ದಿಗಾರರು ಶಾರ್ಟಹ್ಯಾಂಡಿನಲ್ಲಿ ಭಾಷಣವನ್ನು ಬರೆದುಕೊಳ್ಳುತ್ತಾರೆ. ಅದೇ ಯಾರಾದರೂ ಸಿದ್ಧಲಿಖಿತ ಕಾಗದವನ್ನು ಓದಿದರೆ ಸುದ್ದಿಗಾರರು ಅದನ್ನು ಬರೆದುಕೊಳ್ಳುವದಿಲ್ಲ. ಓದುವದಾದ ಮೇಲೆ ಆ ಕಾಗದವನ್ನು ಇಸಗೊಂಡು ಅದರ ಅವತರಣೆ ಮಾಡಿಕೊಳ್ಳುತ್ತಾರೆ. ಒಮ್ಮೆ ಒಬ್ಬನು ತಾನು ಬರೆದುತಂದ ಕಾಗದವನ್ನು ಓದಿದನು. ಸುದ್ದಿಗಾರರು ಆ ಕಾಗದ ಕೇಳುವರೆಂದು ಅವನಿಗೆ ಗೊತ್ತಿತ್ತು. ಆದ್ದರಿಂದ ತನ್ನ ಕಾಗದದಲ್ಲಿ ಬರೆದ ಭಾಷಣದಲ್ಲಿ ನಡುನಡುವೆ "ಚಪ್ಪಾಳೆ" "ನಗೆ" ಎಂದು ಬರೆದಿದ್ದನು. ಸುದ್ದಿಗಾರರು ಭಾಷಣವನ್ನು ನಕಲು ಮಾಡುವಾಗ ಹೌಹಾರಿ ಕುಳಿತರು!

* * * *

೧೯೧೧ನೇ ಇಸ್ವಿಯಲ್ಲಿ 'ಲಂಡನ್ ಟಾಯಿಮ್ಸ್'ದ ನೌಕರಿಯಲ್ಲಿ ಒಬ್ಬ ಸುದ್ದಿಗಾರನಿದ್ದನು. ಮಹಾ ಆಲಸಿ. ಆದರೆ ವರ್ಣನೆ ಮಾಡುವದರಲ್ಲಿ ಅತಿ ಪ್ರವೀಣನು. ಪರಲೋಕವಾಸಿ ಪಂಚಮಜಾರ್ಜ ಬಾದಶಹರ ರಾಜ್ಯಾರೋಹಣ ಸಮಾರಂಭದ ಮೆರವಣಿಗೆಯ ವರ್ಣನೆಯನ್ನು ಬರೆಯಲು ಸಂಪಾದಕರು ಆ ಸುದ್ದಿಗಾರನಿಗೆ ಆಜ್ಞಾಪಿಸಿದರು. ಮೊದಲೇ ಆಲಸಿ. ಮೆರವಣಿಗೆಯ ವೇಳೆ ಮುಗಿದ ಮೇಲೆ ಹಾಸಿಗೆಯಿಂದ ಎದ್ದನು. ಕಣ್ಣು ತಿಕ್ಕುತ್ತ ವೇಳೆ ನೋಡಿದನು. ಮೆರವಣಿಗೆಯ ವೇಳೆ ಮುಗಿದಿತ್ತು. ಆದರೆ ಆತ ಎದೆಗುಂದದೆ ಒಂದು ಕಾಲ್ಪನಿಕ ವರ್ಣನೆಯನ್ನು ಬರೆದನು. ವೆಸ್ಟ್ ಮಿನ್ಸ್ಟರ್ ಚರ್ಚಿನ ಎದುರಿಗೆ ರಚಿಸಿದ ಭವ್ಯವಾದ ಕಮಾನಿನಲ್ಲಿ ಮೆರವಣಿಗೆ

ಹಾಯ್ದು ಹೋಗುವಾಗ ಸರ್ವೋತ್ಕೃಷ್ಟ ದೃಶ್ಯವು ಕಂಡುಬಂತೆಂದು ಬರೆದು ಬಿಟ್ಟಿದ್ದನು. ಆದರೆ ದುರ್ದೈವದಿಂದ ಮೆರವಣಿಗೆಯು ಸುರುವಾಗುವದಕ್ಕಿಂತ ಸ್ವಲ್ಪ ಮೊದಲೇ ಆಕಸ್ಮಾತ್ತಾಗಿ ಬೆಂಕಿ ಹತ್ತಿ ಆ ಕಮಾನು ಸುಟ್ಟು ಹೋಗಿತ್ತು. ಆದ್ದರಿಂದ ಆ ಸ್ಥಳದಲ್ಲಿ ದೃಶ್ಯವು ರಮಣೀಯವಾಗಿರದೆ ತದ್ವಿರುದ್ಧವಾಗಿತ್ತು. ಸಂಪಾದಕರು ಸುದ್ದಿಗಾರನ ಕಾಲ್ಪನಿಕ ವರ್ಣನೆ ಯನ್ನು ಓದಿದ ಕೂಡಲೆ ಅವನನ್ನು ನೌಕರಿಯಿಂದ ತೆಗೆದರು.

ಸುದ್ದಿಗಾರನು ಸುಮ್ಮನೇ ಕೂಡ್ರಲಿಲ್ಲ. ಒಂದು ಅನಾಥಾಶ್ರಮಕ್ಕೆ ಹೋಗಿ ತನ್ನ ಮುಖವನ್ನು ಹೋಲುವ ಬೇರೆ ಬೇರೆ ವಯಸ್ಸಿನ ನಾಲ್ಕು ಚಿಕ್ಕ ಹುಡುಗರನ್ನು ಕೂಡಿಸಿದನು. ಅವರಿಗೆ ಬಿಸ್ಕೀಟು-ಕೇಕುಗಳನ್ನು ತಿನ್ನಿಸಿ, ಚಹಾ ಕುಡಿಸಿ, ಅವರೊಡನೆ ಸಂಪಾದಕರ ಹತ್ತರ ಹೋದನು. ಸಂಪಾದಕರಿಗೆ ಹೇಳಿದನು—"ನೀವು ನನಗೆ ಬೇಕಾದ ಶಿಕ್ಷೆಯನ್ನು ವಿಧಿಸಿರಿ. ಆದರೆ ಈ ನನ್ನ ಮಕ್ಕಳ ಉಪಜೀವನದ ಮಾರ್ಗವನ್ನು ನಿಲ್ಲಿಸಬೇಡಿರಿ" ಹೀಗೆ ಅಂದು ಅಳು ವಂತೆ ನಟಿಸಿ ಕಣ್ಣುತುಂಬ ನೀರು ತಂದನು. ತಮಗೆ ಉಣಿಸಿ ತಿನಿಸಿದ ಹಿತೈಷಿಯು ಅಳುವದನ್ನು ಕಂಡು ಚಿಕ್ಕ ಹುಡುಗರೂ ಅಳಹತ್ತಿದರು. ಸುದ್ದಿ ಗಾರನಿಗೆ ಪುನಃ ನೌಕರಿಯು ದೊರೆಯಿತು.

# ಸುಖ-ದುಃಖ

ಜಗತ್ತಿನಲ್ಲಿಯ ಎಲ್ಲ ಸುಖದುಃಖವನ್ನು ಕೂಡಿಸಿ ಸರಿಸಮಾನವಾಗಿ ಹಂಚಿದರೆ ಪ್ರತಿಯೊಬ್ಬನ ಭಾಗಕ್ಕೆ ಬರುವ ಸುಖದುಃಖದಿಂದ ಯಾವನೂ ಸಂತುಷ್ಟನಾಗುವದಿಲ್ಲೆಂದು ಜಗದ್ವಿಖ್ಯಾತ ತತ್ವಜ್ಞಾನಿಯಾದ ಸಾಕ್ರೇಟಿಸನು ಹೇಳಿದ್ದಾನೆ. ಅದೇ ತತ್ವವನ್ನು ವಿಂಗಡಿಸಿ, ವಿಸ್ತರಿಸಿ ಪ್ಲೇಟೊ ಎಂಬ ಬೇರೊಬ್ಬ ತತ್ವಜ್ಞಾನಿಯು ಹೀಗೆ ಕಥಾರೂಪವಾಗಿ ಬರೆದಿದ್ದಾನೆ:—

* * * *

ಒಂದಾನೊಂದು ಕಾಲದಲ್ಲಿ ಜನರು ಬಹಳ ಕಷ್ಟಪೀಡಿತರಾದ್ದರಿಂದ, ತಮ್ಮತಮ್ಮ ಕಷ್ಟನಷ್ಟಗಳನ್ನು ತರಬೇಕೆಂದು ದೇವರು ಆಜ್ಞೆ ಮಾಡಿದನು.

ಆಗ ಎಲ್ಲರೂ ತಮ್ಮ ತಲೆಯಮೇಲೆ ದುಃಖದ ಗಂಟುಗಳನ್ನು ಹೊತ್ತು ಕೊಂಡು ಬಂದು ಕೂಡಹಾಕಿದರು. ದುಃಖಗಳದೊಂದು ದೊಡ್ಡ ರಾಶಿ ಯಾಯಿತು.

* * * *

ಒಬ್ಬ ಮನುಷ್ಯನಿಗೆ ಒಬ್ಬ ಹಟಿಯಾದ, ಮೂಢನಾದ, ದುರ್ಗುಣಿ ಯಾದ, ಜಗಳಗಂಟನಾದ, ತ್ರಾಸದಾಯಕನಾದ ಮಗನಿದ್ದನು. ಮಗ ನಿಂದುಂಟಾಗುವ ತ್ರಾಸದಿಂದ ದೂರಾಗಲು ತನ್ನ ಮಗನನ್ನು ತಂದು ಆ ರಾಶಿ ಯಲ್ಲಿ ಚಲ್ಲಿದ್ದನು.

* * * *

ಆ ಮೇಲೆ "ಈ ರಾಶಿಯೊಳಗಿಂದ ನಿಮಗೆ ಸುಖ ಕೊಡಬಹುದಾದ ವಸ್ತುಗಳನ್ನು ಆರಿಸಿಕೊಳ್ಳಿರಿ" ಎಂದು ದೇವಾಜ್ಞೆಯಾಯಿತು. ಆಗ ಎಲ್ಲರೂ ತಮಗೆ ಸುಖದಾಯಕವೆಂದು ತಿಳಿದುಕೊಂಡ ವಸ್ತುಗಳನ್ನು ಆರಿಸಿಕೊಳ್ಳ ಹತ್ತಿದರು.

* * * *

ಒಬ್ಬ ಮುದುಕನಿಗೆ ಮಕ್ಕಳಿದ್ದಿಲ್ಲ. ಸಂತತಿ ಇರದ್ದರಿಂದ ಆದ ದುಃಖದ ಗಂಟನ್ನು ತಂದು ರಾಶಿಯಲ್ಲಿ ಚಲ್ಲಿದ್ದನು. ಈಗ ಸುಂದರ ತರುಣನನ್ನು ರಾಶಿಯಲ್ಲಿ ಹುಡುಕಹತ್ತಿದನು. ಹುಡುಕುವಾಗ ಮೇಲ್ಕಾಣಿಸಿದ ಆ ಮೂಢ ತ್ರಾಸದಾಯಕ ತರುಣನು ಕೈಗೆ ಸಿಕ್ಕನು. ಅವನನ್ನು ಹೊತ್ತುಕೊಂಡು ತೃಪ್ತಿಹೊಂದಿ ಹೊರಟನು.

* * * *

ಇನ್ನೂ ಸ್ವಲ್ಪ ದೂರ ಹೋಗಿದ್ದಿಲ್ಲ. ತಟ್ಟನೆ ತರುಣನು ಕೆಳಗೆ ಜಿಗಿದು ಮುದುಕನ ಗಡ್ಡ ಹಿಡಿದು ಎಳೆಯಹತ್ತಿದನು. ಬೈಯಲು, ಹೊಡೆ ಯಲು ಪ್ರಾರಂಭಿಸಿದನು. ಮುದುಕನಿಗೆ ಸಂತತಿಯು ಇರದ ತಾಪಕ್ಕಿಂತ ಸಂತತಿಯು ದೊರೆತ ಮೇಲಿನ ತ್ರಾಸವು ಮಿತಿಮೀರಿತು.

* * * *

"ದೇವಾ, ನನಗೆ ಸಂತತಿ ಇಲ್ಲದಾಗ ನಾನು ಸುಖಿಯಾಗಿದ್ದೆ. ಈ ದುಷ್ಟ ತರುಣನಿಂದಾಗುವ ತಾಪವನ್ನು ಸಹಿಸಲಾರೆ. ನೀನೇ ನನ್ನನ್ನು ರಕ್ಷಿಸು" ಎಂದು ದೇವರನ್ನು ಪ್ರಾರ್ಥಿಸಹತ್ತಿದನು.

ಆದರೆ ಸುಖವಾದೀತೆಂದು ತಾನೇ ಆರಿಸಿಕೊಂಡ ವಸ್ತುವಿನಿಂದಾಗುವ ಕಷ್ಟವನ್ನು ಉಪಭೋಗಿಸಲೇಬೇಕಾಯಿತು. ಬಿಟ್ಟಿದ್ದಲ್ಲ. ಬಿಡಲಿಲ್ಲ !

* * * *

ಸದ್ಯಃ ಜಗತ್ತಿನಲ್ಲಿ ಮಿಗಿಲಾದ ನಾಮಾಂಕಿತ ನಾಟಕಕಾರರೆಂದರೆ **ಜಾರ್ಜ ಬರ್ನಾರ್ಡ ಶಾ** ಇವರು. ಒಮ್ಮೆ ಓರ್ವ ಫ್ರೆಂಚ್ ತರುಣಿಯು ಇವರ ಹತ್ತಿರ ಬಂದು ಪ್ರಸ್ತಾಪಿಸಿದಳು. "ನೀವು ಚತುರರಿರುವಿರಿ. ನಾನು ಸುಂದರಿಯು. ನಾವೀರ್ವರು ಲಗ್ನವಾದರೆ ನಮ್ಮ ಸಂತತಿಯಲ್ಲಿ ನಿಮ್ಮ ಜಾಣತನವೂ ನನ್ನ ಸೌಂದರ್ಯವೂ ಒಡಮೂಡುವವು. ಸರ್ವೋತ್ಕೃಷ್ಟ ಸಂತತಿಯಾಗುವದು." ಆಗ ಜಾರ್ಜ ಬರ್ನಾರ್ಡ ಶಾ ಹೀಗೆ ಉತ್ತರ ಕೊಟ್ಟರು. "ಆದರೆ ಒಂದು ವೇಳೆ ನಮ್ಮ ಸಂತತಿಯಲ್ಲಿ ನಿನ್ನ ಜಾಣತನ (ಮೂರ್ಖತನ?) ಮತ್ತು ನನ್ನ ಸೌಂದರ್ಯ (ಕುರೂಪ) ಒಡಮೂಡಿದರೆ ಏನು ಮಾಡಬೇಕು?"

* * * *

೧೯೩೨ನೇ ಇಸ್ವಿಯಲ್ಲಿ ಲಾಯಿಡ ಜಾರ್ಜರು ಅಸ್ವಸ್ಥತೆಯ ನಂತರ ಪ್ರಕೃತಿಯನ್ನು ಸುಧಾರಿಸಿಕೊಳ್ಳಲು ಸಿಲೋನ (ಸಿಂಹಳ ದ್ವೀಪ)ಕ್ಕೆ ಹೋಗಿದ್ದರು. ಆರು ವಾರಗಳ ವರೆಗೆ ಅಲ್ಲಿದ್ದು ತಿರುಗಿ ಹೋದರು. ಕೆಲವು ದಿವಸಗಳ ನಂತರ ಜಾರ್ಜ ಬರ್ನಾರ್ಡ ಶಾ ಇವರು ಜಗತ್ತಿನ ಪ್ರವಾಸ ಮಾಡುವಾಗ ಸಿಂಹಳದ್ವೀಪದಲ್ಲಿ ಮೂರು ದಿವಸ ನಿಂತಿದ್ದರು. ಆಗ ಅಲ್ಲಿಯ ಒಬ್ಬ ನಿವಾಸಿಯೊಂದಿಗೆ ಹೀಗೆ ಸಂಭಾಷಣೆಯಾಯಿತು:

ಅಲ್ಲಿಯ ನಿವಾಸಿ: — ನಮ್ಮ ನಡುಗಡ್ಡೆಯ ವಿಷಯವಾಗಿ ನಿಮ್ಮ ಅಭಿಪ್ರಾಯವೇನಿದೆ?

ಜಾ. ಬ. ಶಾ:— ಅಷ್ಟೇನೂ ನನ್ನ ಮನಸ್ಸಿಗೆ ಬರಲಿಲ್ಲ!

ನಿವಾಸಿ:— ಆದರೆ ಇದು ಜಗತ್ತಿನಲ್ಲಿ ಎಲ್ಲಕ್ಕೂ ರಮಣೀಯವಾದ ಸ್ಥಳವೆಂದು ಮೊನ್ನೆ ಲಾಯಡ್ ಜಾರ್ಜರು ಹೇಳಿದರಲ್ಲ?

ಜಾ. ಬ. ಶಾ:— ಲಾಯಡ್ ಜಾರ್ಜರನ್ನು ನಂಬುವಷ್ಟು ಮೂರ್ಖರಾಗಬೇಡಿರಿ. ಹೋದಹೋದಲ್ಲೆಲ್ಲ ಅವರು ಹಾಗೇ ಹೇಳುತ್ತಾರೆ.

# ಊಟ-ಉಪಚಾರ

ಊಟಕ್ಕೆ ಕುಳಿತಾಗ ಮಾತಾಡಬೇಕೋ ಮಾತಾಡಬಾರದೋ ಎಂಬ ವಿಷಯದ ಮೇಲೆ ಸದಾ ಭಿನ್ನಾಭಿಪ್ರಾಯವಿದೆ. ವಿಶೇಷತಃ ಹಕೀಮರೂ ವೈದ್ಯರೂ ಊಟಕ್ಕೆ ಕುಳಿತಾಗ ಮಾತಾಡಬಾರದೆಂದು ಅಭಿಪ್ರಾಯಪಡುತ್ತಿದ್ದರೆ, ಡಾಕ್ಟರ ಜನರು ಮಾತಾಡಬೇಕೆಂದು ಹೇಳುತ್ತಾರೆ. ನನ್ನ ಅಭಿಪ್ರಾಯವೆಂದರೆ ಮಾತಾಡುವಾಗ ಊಟ ಮಾಡಬಾರದು!

*　　*　　*　　*

ಊಟ ಮಾಡುವಾಗ ಮಾತಾಡಬಾರದೆಂದು ಹಕೀಮರೂ ವೈದ್ಯರೂ ಉಪದೇಶ ಮಾಡುತ್ತಾರಷ್ಟೇ. ಅವರೇ ಎರಡನೆಯವರ ಮನೆಗೆ ಊಟಕ್ಕೆ ಹೋದಾಗ ಅವರ ಊಟ ಮತ್ತು ಮಾತು ಎರಡೂ ಒಂದೇ ಸವನೆ ಸರಿಸಮಾನ ವೇಗದಿಂದ ನಡೆಯುತ್ತವೆ!

*　　*　　*　　*

ಊಟ ಮಾಡುವಾಗ ಮಾತನಾಡಲೇಬೇಕೆಂದು ನೈಸರ್ಗಿಕ ತತ್ವವಿದ್ದದ್ದಾದರೆ, ಮಾತಾಡುವದಕ್ಕಾಗಿ ಬೇರೊಂದು ಇಂದ್ರಿಯವನ್ನು ಬಾಯಿಯ ಜೊತೆಗೆ ದೇವರು ನಿರ್ಮಿಸುತ್ತಿದ್ದನೆಂಬದು ಸ್ಪಷ್ಟವಾದ ಮಾತು. ಆದರೆ ಹಾಗೆ ಮಾಡದೆ, ಎರಡರ ಸಲುವಾಗಿ ಒಂದೇ ಇಂದ್ರಿಯವನ್ನು ಹುಟ್ಟಿಸಿದ್ದರಿಂದ ಕೇವಲ ಒಂದು ವೇಳೆಯಲ್ಲಿ ಬಾಯಿಯನ್ನು ಒಂದೇ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಸದಾ ವಟವಟ ಮಾತಾಡುವವರು ಊಟಕ್ಕೆ ಕುಳಿತಾಗ ಅಷ್ಟೇ ಏಕೆ? ನಿದ್ರೆಯಲ್ಲಿ ಸಹ ಬಡಬಡಿಸುವರು!

*　　*　　*　　*

ಸ್ತ್ರೀಯರಲ್ಲಿ ವಿಶೇಷವಾಗಿ ಮಾತಾಡುವ ಚಟವು ಕಂಡುಬರುತ್ತದೆ. ಹೆಚ್ಚಾಗಿ ಮುದುಕಿಯರಲ್ಲಿ. ಯಾರೂ ಮಾತಾಡಲಿಕ್ಕೆ ಸಿಗದಿದ್ದರೆ, ಕಡೆಗೆ ತಮ್ಮಷ್ಟಕ್ಕೆ ತಾವೇ ಗುಣಗುಟ್ಟುತ್ತ ಕೂಡ್ರುವರು.

ಊಟಕ್ಕೆ ಕುಳಿತಾಗ ಮಾತಾಡಲು ಅಡ್ಡಿ ಇರದಿದ್ದರೆ ಒದರಲಿಕ್ಕೆ ಅಡ್ಡಿ ಇಲ್ಲ. ನಗಲಿಕ್ಕೆ ಅಡ್ಡಿ ಇಲ್ಲ. ಅಳಲಿಕ್ಕೆ ಅಡ್ಡಿ ಇಲ್ಲ. ಜಗಳಾಡಲಿಕ್ಕೆ ಅಡ್ಡಿ ಇಲ್ಲ. ಹೀಗೆ ಇದಕ್ಕೆ ಮಿತಿಯೇ ಇರದಂತೆ ಆಗುತ್ತದೆ. ಊಟಕ್ಕೆ ಕುಳಿತಾಗಿನ ಮುಖ್ಯ ಕೆಲಸವು ಊಟವು; ಮಾತಲ್ಲ. ಮಾತಿನ ಭರದಲ್ಲಿ ಊಟವನ್ನೇ ಮರೆತುಬಿಡುವ ಸಂಭವವು ಇರದಿದ್ದರೂ, ಅದೇನೂ ತೀರ ಅಸಂಭವವಲ್ಲ.

* * * *

ಅಂಗಹೀನರ ದೈವ ತೆರೆದಂತಾಯಿತು. ಈಗ ಪಾಶ್ಚಾತ್ಯ ಸಂಶೋಧಕನೊಬ್ಬನು ಮೂಗು ಇಲ್ಲದವರಿಗೆ ಪ್ಲಾಸ್ಟರಿನ ಕೃತ್ರಿಮವಾದ ಮೂಗು ಹಚ್ಚುತ್ತಾನೆ. ಕಿವಿ ಹರಿದಿದ್ದರೆ ಅದನ್ನು ಜೋಡಿಸುತ್ತಾನೆ. ಕಣ್ಣುಗಳು ಕೆಟ್ಟರೆ ಕೃತ್ರಿಮ ಕಣ್ಣುಗಳನ್ನು ಕೂಡ್ರಿಸುತ್ತಾನೆ. ಒಮ್ಮೆ ಜೋಡಿಸಿ ಬಿಟ್ಟರೆ ನಿಜವಾದ ಇಂದ್ರಿಯಗಳಂತೆ ಕಾಣಿಸುತ್ತವೆ. ಹಲ್ಲು ಹಾಕಿಸಿದವರು ಪ್ರತಿ ದಿವಸ ಹಲ್ಲು ತೆಗೆದು ಸ್ವಚ್ಛ ಮಾಡುವಂತೆ ಪ್ಲಾಸ್ಟರ ಇಂದ್ರಿಯಗಳನ್ನು ತೆಗೆಯುವ ಅವಶ್ಯವಿಲ್ಲ. ತೊಳೆಯುವ ಅವಶ್ಯವಿಲ್ಲ. ಒಮ್ಮೆ ಜೋಡಿಸಿದರೆ ಆಯಿತು. ಕಡೆತನಕ ಉಳಿಯುವವು.

* * * *

ಆದರೆ ನಿಜವಾದ ಇಂದ್ರಿಯಗಳಂತೆ ಕೃತ್ರಿಮ ಕಣ್ಣುಗಳಿಂದ ನೋಡಲಿಕ್ಕೆ ಬರುವದಿಲ್ಲ. ಕೃತ್ರಿಮ ಕಿವಿ-ಮೂಗುಗಳಿಂದ ಶ್ರವಣ-ಘ್ರಾಣಗಳ ವ್ಯಾಪಾರ ಸಾಗುವದಿಲ್ಲ. ಇದರ ಮುಖ್ಯ ಪರಿಣಾಮವೆಂದರೆ ಅಂಗಹೀನತೆಯಿಂದ ಉಂಟಾದ ಕುರೂಪವು ಹೋಗುವದು. ನತ್ತು ಮೂಗಬೊಟ್ಟು ಇಡಬೇಕೆಂದು ಅಪೇಕ್ಷಿಸುವ ಮೂಗಿಲ್ಲದ ಸ್ತ್ರೀಗೆ ಆ ಆಭರಣಗಳನ್ನು ಧರಿಸಲು ಅನುಕೂಲವಾಗುವದು. ಕೆಲವು ಸ್ತ್ರೀಯರಿಗೆ ಮೂಗು ಅಷ್ಟೊಂದು ಬೇಕಿಲ್ಲ. ನತ್ತು ಮೂಗಬೊಟ್ಟು ಇಡಲಿಕ್ಕೆ ಬಂದರೆ ಸಾಕು!



# ಎಡಗೈ ಬಿನ್ನಹಪತ್ರಕ್ಕೆ ಬಲಗೈ ಉತ್ತರ

ಪ್ರೌಢ ರಸಿಕ ಜನರುಗಳಿರಾ,

ಪ್ರಾಥಮಿಕ ಪಠ್ಯಪುಸ್ತಕದಲ್ಲಿ ಎಡಗೈಯ ಬಿನ್ನಹಪತ್ರವನ್ನು ನೀವು ಓದಿರುವಿರಷ್ಟೇ. ನಾನು (ಬಲಗೈ) ಆಲಸಿಯಾಗಿದ್ದೇನೆಂದೂ ಎಡಗೈಯ ಸಹಾಯವಿಲ್ಲದೆ ಯಾವ ಕೆಲಸವೂ ನನ್ನಿಂದ ಆಗುವದಿಲ್ಲೆಂದೂ ನಮ್ಮ ಹಿರಿಯರು ಪಕ್ಷಪಾತದಿಂದ ನನಗೆ ವಿದ್ಯೆ ಕಲಿಸುತ್ತಾರೆಂದೂ ಮತ್ತು ಎಡಗೈಗೆ ಕಲಿಸುವದಿಲ್ಲೆಂದೂ ಇನ್ನೂ ಅನೇಕ ಆಕ್ಷೇಪಾರ್ಹ ಸಂಗತಿಗಳನ್ನು ಎಡಗೈಯು ತನ್ನ ಬಿನ್ನಹಪತ್ರದಲ್ಲಿ ಬರೆದಿದೆ. ಚಿಕ್ಕಮಕ್ಕಳ ಪಠ್ಯಪುಸ್ತದಲ್ಲಿ ಈ ಪತ್ರವನ್ನು ಬರೆದು ನನ್ನ ವಿಷಯವಾಗಿ ವಿಪರೀತ ಕಲ್ಪನೆಗಳನ್ನು ಬಾಲಕರ ಮನಸ್ಸಿನಲ್ಲಿ ಹುಟ್ಟಿಸುವದು ಹೆಚ್ಚಾಗಿ ತಿರಸ್ಕರಣೀಯವಿದೆ.

* * * *

ನಿಜವಾಗಿ ವಿಚಾರಿಸಿದರೆ ಎಡಗೈಯೇ ಆಲಸಿ ಇದೆ. ಕೆಲಸ ಮಾಡಲು ಯಾವಾಗಲೂ ಹಿಂಜರಿಯುತ್ತದೆ. ಏನಾದರೂ ಬರೆಯ ಹೇಳಿದರೆ ಅಂಕಡೊಂಕಾಗಿ ಬರೆದು ತನ್ನನ್ನು ತಾನೇ ಅಯೋಗ್ಯ ಮತ್ತು ಅಸಮರ್ಥ ಎಂದು ಸಿದ್ಧಮಾಡಿ ಕೊಡುತ್ತದೆ. ನಾನು ಕೆಲಸ ಮಾಡುವಾಗ ನನಗೆ ಸಹಾಯ ಮಾಡಿದಂತೆ ಮಾತ್ರ ನಟಿಸುತ್ತದೆ. ಆದರೆ ಅದು ಕೇವಲ ವೈಗಳ್ಳತನದ ಸಮಯ. ಬರೆಯುವವನು ನಾನು ಬಾರಿಸುವವನೂ ನಾನು. ಹೊರುವವನು ನಾನು ತರುವವನು ನಾನು. ಇಡುವವನು ನಾನು. ಅರ್ಥಾತ್ ಎಲ್ಲ ಕೆಲಸ ಮಾಡಿ ದಣಿಯುವವನು ನಾನು. ನನಗೆ ಅಲ್ಪಸ್ವಲ್ಪ ಸಹಾಯ ಮಾಡಿದಂತೆ ನಟಿಸಿ ಸುಖರೂಪವಾಗಿ ಜೀವಿಸುವದು ಎಡಗೈಯು!

* * * *

ನಮ್ಮ ಹಿರಿಯರ ಮೇಲೆ ಪಕ್ಷಪಾತದ ಆರೋಪವನ್ನಿಟ್ಟಿದೆ. ಇದು ಸರ್ವಥಾ ತಪ್ಪು. ನನ್ನಂತೆ ಅದನ್ನೂ ಪೋಷಿಸುತ್ತಾರೆ. ಅರಿವೆ ತೊಡಿಸುತ್ತಾರೆ. ಯಾವ ತರಹದ ಭೇದಭಾವ ಮಾಡುವದಿಲ್ಲ. ಆದರೆ ನನ್ನ ಜಾಣ

ತನ ಮತ್ತು ಕೆಲಸ ಇವುಗಳ ಮೂಲಕ ನನ್ನ ಮೇಲೆ ಹೆಚ್ಚು ಲಕ್ಷವಿಡುವದು ಸ್ವಾಭಾವಿಕ. ಇದರಿಂದ ಎಡಗೈಯನ್ನು ದುರ್ಲಕ್ಷಿಸುತ್ತಾರೆಂದು ಅನ್ನಲಾರೆ. ಹಿರಿಯರ ಮೇಲಿಟ್ಟ ಈ ಆರೋಪವು ಕೇವಲ ಎಡಗೈಯ ಹೊಟ್ಟೆಕಿಚ್ಚಿನ ಮೂಲಕವಿದೆ.

* * * *

ಚಿಕ್ಕಮಕ್ಕಳ ಮನಸ್ಸಿನ ಮೇಲೆ ತೀವ್ರ ಪರಿಣಾಮವಾಗುತ್ತದೆಂಬುದು ಸುಳ್ಳಲ್ಲ. ಎಡಗೈಯು ಬಿನ್ನಹಪತ್ರ ಬರೆದನಂತರ ಹೊಸ ಪೀಳಿಗೆಯಲ್ಲಿ ನನ್ನ ವಿಷಯವಾಗಿ ಆದರವು ಕಡಿಮೆಯಾದಂತೆ ಕಾಣುತ್ತದೆ. ಇಷ್ಟೇ ಅಲ್ಲ, ಜನರಲ್ಲಿ ನನಗಿಂತ ಎಡಗೈಯ ಸಲುವಾಗಿ ಹೆಚ್ಚು ಕಳಕಳಿ ಉತ್ಪನ್ನವಾಗಿದೆ. ಉದಾಹರಣಾರ್ಥವಾಗಿ ಎಡಗೈಯಲ್ಲಿ ಬೆಳ್ಳಿ-ಬಂಗಾರದ ವಾಚುಗಳನ್ನು ಕಟ್ಟುವರು. ಉಂಗುರವನ್ನೂ ಎಡಗೈ ಬೆರಳಿನಲ್ಲಿಯೇ ಇಡುವರು. ಸ್ಕೌಟ ಹುಡುಗರೂ ಗರ್ಲಗಾಯಿಡ ಹುಡಿಗೆಯರೂ ಎಡಗೈಯಿಂದ ಹಸ್ತಾಂದೋಲನ (Shake-hand) ಮಾಡುತ್ತಾರೆ. ಸುವಾಸನೆಯುಳ್ಳ ಬಣ್ಣದ ಕೈವಸ್ತ್ರಗಳನ್ನು ಎಡಗೈಯ ತೋಳಿನಲ್ಲಿ ಎದ್ದು ಕಾಣುವಂತೆ ಇಡುತ್ತಾರೆ. ಇಷ್ಟೆಲ್ಲ ಆಡಂಬರ ಎಡಗೈಯದು.

* * * *

ಊರಲ್ಲಿ ಪ್ಲೇಗು ಬೇನೆಯು ಪಸರಿಸಿದರೆ ಕೂಡಲೆ ಎಡಗೈಗೆ ವ್ಯಾಲಿ ಚುಚ್ಚಿ ಅದನ್ನು ಉಳಿಸಲು ಪ್ರಯತ್ನಿಸುತ್ತಾರೆ. ನಾನು ಎಷ್ಟು ಕಷ್ಟ ಸಹಿಸಿದರೂ ನನ್ನ ಸಲುವಾಗಿ ಯಾರೂ ಕಾಳಜಿ ಮಾಡುವದಿಲ್ಲ. ದಾರಿಯಲ್ಲಿ ಮೋಟರ್, ಚಕ್ಕಡಿ, ಸೈಕಲ್ಲು ಮೊದಲಾದ ವಾಹನಗಳು ಎಡಭಾಗದಿಂದಲೇ ಹೋಗಬೇಕೆಂದು ನಿಯಮ ಮಾಡಿದ್ದಾರೆ. ರಾಜಕೀಯ ಪಕ್ಷಗಳಲ್ಲಿ ಎಡಭಾಗದವರು (Leftists) ಮಾತ್ರ ಪ್ರಾಗತಿಕ ಪಕ್ಷದವರೆಂದು ಎಣಿಸಲ್ಪಡುತ್ತಾರೆ. ಕಲಿತ ಸ್ತ್ರೀಯರು ಎಡಗೈಯಲ್ಲಿ ಒಂದಾದರೂ ಚೆಂದವಾದ ಬಳೆಯನ್ನು ಇಡುತ್ತಾರೆ. ಬಲಗೈಯಲ್ಲಿ ಕ್ವಚಿತ್.

* * * *

ವಾಚಕರು ಸಾರಾಸಾರ ವಿಚಾರ ಮಾಡಿ ನಮ್ಮಿಬ್ಬರಲ್ಲಿ ಯಾವನು ಕೆಲಸ ಮಾಡುವವನು ಮತ್ತು ಯಾವನು ವ್ಯಗಳ್ಳನು ? ಯಾವನು ಜಾಣನು

ಮತ್ತು ಯಾವನು ಮೂರ್ಖನು ? ಯಾವನು ಆದರ ಮರ್ಯಾದೆಗೆ ಪಾತ್ರನು ಮತ್ತು ಯಾವನು ಅಯೋಗ್ಯನು? ಎಂಬದನ್ನು ಅಂತಃಕರಣಪೂರ್ವಕವಾಗಿಯೂ ನಿಷ್ಪಕ್ಷಪಾತದಿಂದಲೂ ವಿಚಾರಿಸಿ ನಿರ್ಣಯ ಕೊಡುವರೆಂದು ನೆರೆನಂಬಿದ,

ತಮ್ಮ ಆಜ್ಞಾಧಾರಕ ಸೇವಕ

**ಬಲಗೈ**

# ತುಡುಗತನ

ಕಳವು ಒಂದು ಕಲೆಯು. ಕಂಡಕಂಡವರಿಗೆ ಕದಿಯುವದು ಸಾಧಿಸುವದಿಲ್ಲ. ಕೆಲವರು ಹೊಟ್ಟೆಬಟ್ಟೆಗಾಗಿ ಕದಿಯುವರು. ಕೆಲವರು ಕದಿಯುವ ಚಟದ ಸಲುವಾಗಿ ಕದಿಯುವರು. ಕೆಲವರು ವಿನೋದಕ್ಕಾಗಿ ಕದಿಯುವರು.

ಬ್ರಿಟಿಶ್ ಕೋಲಂಬಿಯಾದಲ್ಲಿ ಕೆಲವು ಕಳ್ಳರು ಸಮಯ ಸಾಧಿಸಿ ಜೇಲಿನಿಂದ ಕೆಲವು ವಸ್ತುಗಳನ್ನು ಕದ್ದರು. ವಿಚಿತ್ರ! ವಸ್ತುಗಳನ್ನು ಕದಿಯದೇ, ಜೇಲಿನಲ್ಲಿದ್ದ ಕೆಲವು ಕಳ್ಳರನ್ನೇ ಕದ್ದು ಒಯ್ದಿದ್ದರೆ ಎಷ್ಟು ನೆಟ್ಟಗಾಗುತ್ತಿತ್ತು!

* * * *

ಇಂಗ್ಲಂಡದಲ್ಲಿ ಕಳುವಿನ ಆರೋಪದ ಮೇಲೆ ಓರ್ವ ಸ್ತ್ರೀಗೆ ಆರುತಿಂಗಳ ಶಿಕ್ಷೆಯಾಯಿತು. ಆಗ ಗಂಡನು ಹೆಂಡತಿಯ ಬದಲು ತನ್ನನ್ನು ಜೇಲಿಗೆ ಕಳಿಸಬೇಕೆಂದು ಪರಿಪರಿಯಾಗಿ ಬೇಡಿಕೊಂಡನು. ನ್ಯಾಯಾಧೀಶರು ಕಿವಿಗೊಡಲಿಲ್ಲ. ನಿಜ. ಉದರಪೋಷಣೆಯನ್ನು ಸಾಗಿಸುವ ಹೆಂಡತಿಯೇ ಸೆರೆಮನೆ ಸೇರಿದರೆ ತನ್ನನ್ನೂ ತನ್ನ ಮಕ್ಕಳನ್ನೂ ಯಾರು ಜೋಪಾನ ಮಾಡಬೇಕೆಂದು ಗಂಡನ ಚಿಂತೆ!

* * * *

ನಮ್ಮ ಒಬ್ಬ ಮಿತ್ರನು ಮುಂಬೈಯಲ್ಲಿ ಅಡ್ಡಾಡುತ್ತಿದ್ದಾಗ ಒಬ್ಬ ತುಡುಗನು ಕಿಸೆ ಕತ್ತರಿಸಿದನು. ಕಿಸೆಯಲ್ಲಿ ಎರಡೆಂದರೆ ಎರಡೇ ದುಡ್ಡು ಇದ್ದವು! ತುಡುಗನು ಪಶ್ಚಾತ್ತಾಪ ಪಟ್ಟು ಎರಡೂ ದುಡ್ಡುಗಳನ್ನು ಕಿಸೆ

ಯಲ್ಲಿಯೇ ಬಿಟ್ಟು ಹೊರಟನು. ಇಷ್ಟರಲ್ಲಿ ನನ್ನ ಮಿತ್ರನಿಗೆ ಅರಿವಾಯಿತು. ಕಿಸೆಯೊಳಗಿಂದ ಆ ಎರಡೂ ದುಡ್ಡು ತೆಗೆದು, ಹೋಗಹತ್ತಿದ್ದ ತುಡುಗನನ್ನು ಕರೆದು, ಆತ " ಕಿಸೆ ಕತ್ತರಿಸಿ ಶ್ರಮಬಟ್ಟಿರುವಿ. ನಿನ್ನ ದುರ್ದೈವ. ಸಿಕ್ಕ ಎರಡು ದುಡ್ಡುಗಳನ್ನಾದರೂ ಏಕೆ ಬಿಡುವಿ? ತೆಗೆದುಕೊ" ಎಂದು ಕೊಡಹೋದನು. ತುಡುಗನು ಹೌಹಾರಿ ಸುಮ್ಮನೆ ನಿಂತನು. ಆಗ ತುಡುಗನಿಗೆ ನನ್ನ ಸ್ನೇಹಿತ ಕೇಳಿದ: " ಇಲ್ಲವಾದರೆ ನಿನ್ನ ಹತ್ತರ ಎರಡು ದುಡ್ಡು ಇದ್ದರೆ, ಕೊಟ್ಟುಬಿಡು, ಅಂದರೆ ಮನೆಗೆ ತಿರುಗಿ ಟ್ರಾಮಿನಲ್ಲಿ ಹೋಗುವೆನು. ನಡೆಯುವ ಶ್ರಮವು ನನಗೆ ತಪ್ಪುವದು. ನಿನ್ನಂಥ ಕಿಸೆ ಕತ್ತರಿಸುವವರಿಗೂ ನಾನು ನಡೆಯುವಾಗ ಕಿಸೆ ಕತ್ತರಿಸುವ ಶ್ರಮವೂ ಉಳಿಯುವದು."

* * * *

ಅಮೇರಿಕೆಯಲ್ಲಿ ತುಡುಗರನ್ನು ಹಿಡಿಯಲು ಹೊಸ ಹೊಸ ಸಾಧನಗಳನ್ನು ಪೋಲೀಸರು ಹುಡುಕಿ ತೆಗೆದಿದ್ದಾರೆ. ಈ ಹೊಸ ಸಾಧನಗಳನ್ನು ತಪ್ಪಿಸಲು ತುಡುಗರು ಸಿದ್ಧರಿರುತ್ತಾರೆ. ಉದಾಹರಣೆ: ಮನೆಯ ಬಾಗಿಲಿಗೆ ಇಲೆಕ್ಟ್ರಿಕ್ ಕೀಲಿಗಳನ್ನು ಹಾಕುತ್ತಾರೆ. ತುಡುಗರು ಕೀಲಿ ತೆಗೆಯಬೇಕೆಂದಾಗಲಿ ಮುರಿಯಬೇಕೆಂದಾಗಲಿ ಅದನ್ನು ಹಿಡಿದರೆ ಕೈ ಗಟ್ಟಿಯಾಗಿ ಅಂಟಿಕೊಳ್ಳುತ್ತವೆ. ಆದರೆ ಹೀಗೆ ಅಂಟಿಕೊಳ್ಳಬಾರದೆಂದು ತುಡುಗರು ಒಂದು ತರಹದ ಕೈಚೀಲವನ್ನು ಹಾಕಿಕೊಳ್ಳುತ್ತಾರೆ.

* * * *

ಅಮೇರಿಕೆಯ ಬ್ಯಾಂಕುಗಳ ಕಂಪೌಂಡಿನಲ್ಲಿ ಅದೃಶ್ಯ ಇಲೆಕ್ಟ್ರಿಕ್ ಕಿರಣಗಳು ಪಸರಿಸಿರುತ್ತವೆ. ರಾತ್ರಿ ಯಾರಾದರೂ ಕಂಪೌಂಡಿನಲ್ಲಿ ಹಾಯ್ದರೆ ಕೂಡಲೆ ಚೌಕಿದಾರನ ಖೋಲಿಯಲ್ಲಿ, ಮ್ಯಾನೇಜರನ ಬಂಗ್ಲೆಯಲ್ಲಿ, ಮತ್ತು ಪೋಲೀಸ ಚೌಕಿಯಲ್ಲಿ ಗಂಟೆ ಬಾರಿಸಲಿಕ್ಕೆ ಹತ್ತುತ್ತವೆ. ಆದರೆ ತುಡುಗರು ಇದರ ಪ್ರತಿಕಾರವಾಗಿ ಒಂದು ತರಹದ ಪೋಷಾಕು ಧರಿಸುತ್ತಾರೆ. ಇದರಿಂದ ಎಲ್ಲಿಯೂ ಗಂಟೆ ಬಾರಿಸುವದಿಲ್ಲ. ತುಡುಗರು ಸರಳವಾಗಿ ಬ್ಯಾಂಕು ಹೊಕ್ಕು ತಮ್ಮ ಕಾರ್ಯವನ್ನು ಪೂರ್ಣ ಮಾಡುತ್ತಾರೆ. ಮರುದಿವಸ ಮ್ಯಾನೇಜರನು ಬ್ಯಾಂಕಿಗೆ ಬಂದ ಮೇಲೆ ತುಡುಗಾದದ್ದನ್ನು ನೋಡಿ ಗಂಟೆ ಬಾರಿಸುತ್ತ ಕೂಡ್ರುತ್ತಾನೆ.

# ಬೆಲ್ಲದ ಮಾತು

ಹಿಂದುಸ್ತಾನದಲ್ಲಿ ಹುಟ್ಟುವ ಕಬ್ಬಿನಲ್ಲಿ ೧೨೦ ಲಕ್ಷ ಟನ್ನು ಕಬ್ಬು ತಿನ್ನುವದರಲ್ಲಿ ಮತ್ತು ಕುಡಿಯಲಿಕ್ಕೆ ಹಾಲು ತೆಗೆಯುವದರಲ್ಲಿ ಉಪಯೋಗಿ ಸಲ್ಪಡುತ್ತದೆ. ೧೧೫ ಲಕ್ಷ ಟನ್ನು ಕಬ್ಬಿನಿಂದ ಸಕ್ಕರೆಯು ತಯಾರಾಗುತ್ತದೆ. ೪೪೦ ಲಕ್ಷ ಟನ್ನು ಕಬ್ಬಿನಿಂದ ಬೆಲ್ಲವು ತಯಾರಾಗುತ್ತದೆ.

* * * *

ಈ ಮಾಹಿತಿಯು ಪರಿಪೂರ್ಣವಿಲ್ಲ. ಸ್ವಲ್ಪ ಹೆಚ್ಚು ಮಾಹಿತಿಯು ನಮಗೆ ಬೇಕಾಗಿತ್ತು. ಅಂದರೆ ೪೪೦ ಲಕ್ಷ ಟನ್ನ ಕಬ್ಬಿನಿಂದಾದ ಬೆಲ್ಲದಲ್ಲಿ ಗೋದಿಯ ಹುಗ್ಗಿಗೆ ಎಷ್ಟು ಉಪಯೋಗವಾಗುತ್ತದೆ? ಮಾಲ್ದಿ ಮಾಡಲಿಕ್ಕೆ ಎಷ್ಟು ಬೆಲ್ಲ ಹತ್ತುತ್ತದೆ? ಹೋಳಿಗೆ ಕರಿಗಡಬಿಗೆ ಎಷ್ಟು ಹತ್ತುತ್ತಡೆ? ಅಳುವ ಹುಡುಗರ ಕೈಯಲ್ಲಿ ಕೊಡಲು ಎಷ್ಟು ಬೆಲ್ಲ ಖರ್ಚಾಗುತ್ತದೆ? ಇಲಿ ಇರುವೆಗಳು ಎಷ್ಟು ತಿನ್ನುತ್ತವೆ?

* * * *

ಅದರಂತೆ ಸಕ್ಕರೆಯು ಚಹಾಕ್ಕೆ ಎಷ್ಟು ಉಪಯೋಗವಾಗುತ್ತದೆ? ಜೋಂಗೆಯಮೇಲೆ ಹಾಕಲು ಎಷ್ಟು ಸಕ್ಕರೆಯು ಉಪಯೋಗಿಸಲ್ಪಡುತ್ತದೆ? ಮಠ ದರ್ಗಾಗಳಿಗೆ ಎಷ್ಟು ಸಕ್ಕರಿಯ ಪುಡಿಕೆಗಳು ಹೋಗುತ್ತವೆ? ಬೆಂಡು ಬೆತ್ತಾಸ ರೇವಡಿ ಮೊದಲಾದ ಮಿಠಾಯಿಯ ಸಾಮಾನು ಮಾಡಲು ಎಷ್ಟು ಸಕ್ಕರೆಯು ಖರ್ಚಾಗುತ್ತದೆ?

* * * *

ಚಿಕಿತ್ಸಕರಾದ ಸಂಶೋಧಕರಿಗೆ ಇನ್ನೂ ವಿಶಾಲ ಕ್ಷೇತ್ರವಿದೆ. ಇನ್ನೂ ಹೆಚ್ಚು ಮಾಹಿತಿಯನ್ನು ಹುಡುಕಿ ತೆಗೆಯುವದು ಶಕ್ಯವಿದೆ. ಉದಾಹರಣಾರ್ಥ: ಕೇವಲ ಸಕ್ಕರೆಯನ್ನು ಉಪಯೋಗಿಸುವ ಜನರೆಷ್ಟು? ಕೇವಲ ಬೆಲ್ಲವನ್ನು ಉಪಯೋಗಿಸುವ ಜನರೆಷ್ಟು? ಸಕ್ಕರೆ ಬೆಲ್ಲ ಎರಡನ್ನೂ ಉಪಯೋಗಿಸುವ ಜನರೆಷ್ಟು? ಎರಡೂ ಉಪಯೋಗ ಮಾಡದ ಜನರೆಷ್ಟು? ಬೆಲ್ಲವನ್ನು ಉಪ

ಯೋಗಿಸುವದಿಲ್ಲೆಂದೂ ಕೇವಲ ಸಕ್ಕರೆಯನ್ನು ಉಪಯೋಗಿಸುತ್ತೇವೆಂದೂ ಜಂಭ ಕೊಚ್ಚಿ ಮನೆಯಲ್ಲಿ ಮಾತ್ರ ಬೆಲ್ಲವನ್ನೇ ಉಪಯೋಗಿಸುವ ಬಿಳಿ ಛಾಯದ ಜನರೆಷ್ಟು ? ಅದರಂತೆ ಪರದೇಶದ ಸಕ್ಕರೆಯನ್ನು ಉಪಯೋಗಿಸುವದಿಲ್ಲೆಂದೂ ದೇಶಿ ಸಕ್ಕರೆಯನ್ನಾಗಲಿ ಅದು ಸಿಗದಿದ್ದರೆ ಬೆಲ್ಲವನ್ನಾಗಲಿ ಉಪಯೋಗಿಸುತ್ತೇವೆಂದು ಹೇಳಿ ಮನೆಯಲ್ಲಿ ಮಾತ್ರ ಪರದೇಶದ ಸಕ್ಕರೆಯನ್ನೇ ಉಪಯೋಗಿಸುವ ಸ್ವದೇಶಾಭಿಮಾನಿಗಳೆಷ್ಟು ? ಮೊದಲಾದ ಮನೋರಂಜಕವಾದ ಮಾಹಿತಿಯನ್ನು ಮನಸ್ಸುಗೊಟ್ಟು ಯಾರಾದರೂ ಇನ್ನಾದರೂ ತೆಗೆಯುವರೆಂದು ಬಲವಾದ ಆಶೆ ಇದೆ.

ಅರ್ಥಶಾಸ್ತ್ರ ಸಂಶೋಧಕರು ಇತ್ತ ಅವಶ್ಯ ಲಕ್ಷಗೊಡಬೇಕು. ನಮ್ಮ ಇತಿಹಾಸ ಸಂಶೋಧನೆಯನ್ನು ಪರಕೀಯರು ಮಾಡಿದರು. ನಮ್ಮ ಭಾಷೆಗಳ ಸಂಶೋಧನೆಯನ್ನು ಸಹ ಪರದೇಶದವರು ಮಾಡಿದರು. ಏನು ? ನಮ್ಮ ಹುಗ್ಗಿ, ನಮ್ಮ ಮಾಲ್ದಿ, ನಮ್ಮ ಹೋಳಿಗೆಕಡಬು, ನಮ್ಮ ಚೋಂಗೆಗಳ ವಿಷಯವಾಗಿಯೂ ಪರಕೀಯರೇ ಸಂಶೋಧನೆಯನ್ನು ಮಾಡಬೇಕೆ ?

ಸಕ್ಕರೆ ಬೆಲ್ಲ ಇವೆರಡರಲ್ಲಿ ಅಂತರ:—ಸಕ್ಕರೆಯ ಬಣ್ಣ ಹಳದಿ, ಕೆಂಪು, ಬಿಳಿ ಇರುತ್ತದೆ. ಬೆಲ್ಲದ ಬಣ್ಣ ಬೆಲ್ಲದಂತಹದಿರುತ್ತದೆ. ಸಕ್ಕರೆ ಹಗರು; ಬೆಲ್ಲ ಜಡ. (ಆದರೆ ಒಂದು ಸೇರು ಸಕ್ಕರೆ, ಒಂದು ಸೇರು ಬೆಲ್ಲ ಎರಡೂ ಅಷ್ಟೇ ಭಾರವಾಗಿರುತ್ತವೆ !) ಬೆಲ್ಲವನ್ನು ಚಾಪೆಯಲ್ಲಿ ತುಂಬಿ ಇಡುತ್ತಾರೆ. ಸಕ್ಕರೆಯನ್ನು ಡಬ್ಬಿಗಳಲ್ಲಿ ತುಂಬಿ ಇಡುತ್ತಾರೆ. ಬೆಲ್ಲಕ್ಕೆ ಮೊಸಲು ಇದೆ. [ ಗಾದೆಯ ಮಾತು: ಅಂಗಡಿಯ ಬೆಲ್ಲ ಮನೆಗೆ ಮೊಸಲ! ] ಸಕ್ಕರೆಗೆ ಮೊಸಲು ಇಲ್ಲ. ಸಕ್ಕರೆಯ ಮೇಲೆ ಸುಧಾರಿಸಿದವರ ಪ್ರೀತಿ ಬಹಳ. ಬೆಲ್ಲದ ಮೇಲೆ ಮುದುಕೆಯರ ಮತ್ತು ಸಣ್ಣ ಹುಡುಗರ ಪ್ರೀತಿ ಬಹಳ. ಅಮಾವಾಸ್ಯೆ ಹುಣ್ಣಿವೆಗಳಿಗೆ ಬೆಲ್ಲದ ಧಾರಣೆಯು ಹೆಚ್ಚಾಗುತ್ತದೆ. ಹಿಂದುಸ್ತಾನ ಸರಕಾರದವರು ಸಕ್ಕರೆಯ ಮೇಲಿನ ಕರವನ್ನು ಹೆಚ್ಚಿಸಿದರೆ ಮಾತ್ರ, ಸಕ್ಕರೆಯ ಧಾರಣೆಯು ಬೆಳೆಯುತ್ತದೆ. ಹಳೆಯ ಬೆಲ್ಲ ಔಷಧಕ್ಕೆ ಉಪಯೋಗ ಬೀಳು

ತ ದಿ. ಸಕ್ಕರೆಯನ್ನು ಹಳೆಯದಾಗಗೊಡುವದಿಲ್ಲ. ಇನ್ನೂ ಹೊಸದಿರುವಾಗಲೇ ಅದನ್ನು ಖರ್ಚು ಮಾಡಿಬಿಡುತ್ತಾರೆ

## ವರ್ತಮಾನಪತ್ರಗಳ ಸುದ್ದಿಗಾರರು

ಸರ್ ಎಡ್ವರ್ಡ್ ಬೆಕ್ ಎಂಬವನು ಹಿಂದುಸ್ತಾನದಲ್ಲಿ ಲಂಡನ್ ಟಾಯಿಮ್ಸ್‌ದ ಪ್ರತಿನಿಧಿಯಾಗಿದ್ದನು. ಆಗಿನ ವ್ಹಾಯಿಸರಾಯನಾದ ಲಾರ್ಡ್ ಹಾರ್ಡಿಂಜ್‌ನ ಮೇಲೆ ಬಾಂಬಿನ ಅತ್ಯಾಚಾರವಾದಾಗ ಇವನು ದಿಲ್ಲಿಯಲ್ಲಿ ಇದ್ದನು. ಆ ದಿವಸ ದಿಲ್ಲಿಯಲ್ಲಿ ದರ್ಬಾರವಿತ್ತು. ಎಲ್ಲ ಮೇಲಧಿಕಾರಿಗಳೂ ಪ್ರಮುಖ ನಾಗರಿಕರೂ ದರ್ಬಾರು ನೆರೆಯುವ ಮೊದಲೇ ಸಭಾಗೃಹದಲ್ಲಿ ಕುಳಿತಿದ್ದರು. ವರ್ತಮಾನಪತ್ರಗಳ ಪ್ರತಿನಿಧಿಗಳೂ ಸಭಾಗೃಹದಲ್ಲಿ ಇದ್ದರು. ಸರ್ ಎಡ್ವರ್ಡ್ ಬೆಕ್‌ನು ಮಾತ್ರ ವ್ಹಾಯಿಸರಾಯನ ಮೆರವಣಿಗೆಯೊಂದಿಗೆ ದಿಲ್ಲಿಯ ಬೀದಿಗಳಲ್ಲಿ ಹೊರಟಿದ್ದನು. ಅಷ್ಟರಲ್ಲಿ ಬಾಂಬು ವ್ಹಾಯಿಸರಾಯನ ಮೇಲೆ ಬಿತ್ತು. ಕೂಡಲೆ ಸರ್ ಎಡ್ವರ್ಡ್ ಬೆಕ್‌ನು ಪಕ್ಕದಲ್ಲಿದ್ದ ಪೋಸ್ಟ ಆಫೀಸಿನಿಂದ ಲಂಡನ್ ಟಾಯಿಮ್ಸ್‌ಕ್ಕೆ 'ಅರ್ಜಂಟ್' ತಂತೀ ಕಳಿಸಿದನು. ಆದ್ದರಿಂದ ದಿಲ್ಲಿಯಲ್ಲಿ ಬಾಂಬ ಹಾರಿದ ಅರ್ಧ ತಾಸಿನಲ್ಲಿ ಲಂಡನ್ ಟಾಯಿಮ್ಸ್ ಪತ್ರವು ದೊಡ್ಡ ಅಕ್ಷರಗಳಲ್ಲಿ ಈ ಸುದ್ದಿಯನ್ನು ಮುದ್ರಿಸಿ ವಿಶೇಷ ಸಂಚಿಕೆಯನ್ನು ಹೊರಡಿಸಿತು. ಲಂಡನ್ನು—ಅದೇಕೆ ಇಡಿ ಇಂಗ್ಲಂಡವೇ—ಗಾಬರಿಗೊಂಡಿತು. ಇಲ್ಲಿ ದಿಲ್ಲಿಯಲ್ಲಿ ದರ್ಬಾರಿನ ಸಮಾರಂಭವಿದ್ದುದರಿಂದ ಸರಕಾರದಿಂದ ಅಧಿಕೃತ ವರದಿಯನ್ನು ಕಳಿಸಲು ತಡವಾಯಿತು. ಲಂಡನ್‌ದಿಂದ ಬಾದಶಹರ ಕಡೆಯಿಂದಲೂ, ಭಾರತ ಮಂತ್ರಿಗಳ ಕಡೆಯಿಂದಲೂ, ಮುಖ್ಯ ಮಂತ್ರಿಗಳ ಕಡೆಯಿಂದಲೂ ಒಂದರ ಮೇಲೊಂದು ಅನೇಕ ತಾರುಗಳು ವ್ಹಾಯಿಸರಾಯನ ಪ್ರಕೃತಿಯ ವಿಚಾರಣೆಯ ಬಗ್ಗೆ ಬಂದವು. ಕಡೆಗೆ ಸುದ್ದಿಯು ಬಹಳ ತಡವಾಗಿ ಹೋದದ್ದರಿಂದ ಹಿಂದುಸ್ತಾನ ಸರಕಾರಕ್ಕೆ 'ತಾಕೀದು' ಬಂತು.

ಕೆಲವು ದಿವಸಗಳು ಸಂದಿದವು. ಒಂದು ದಿವಸ ಸರ್ ಎಡ್ವರ್ಡ್ ಬೆಕ್‌ನ ಪತ್ನಿಯಾದ ಲೇಡಿ ಬೆಕ್ ಇವಳು ಕಲಕತ್ತೆಯಲ್ಲಿ ವ್ಹಾಯಿಸರಾಯ ನೊಂದಿಗೆ ಭೋಜನ ಮಾಡುತ್ತಿದ್ದಳು. ಆಗ ಅವರೀರ್ವರ ನಡುವೆ ಕೆಳಗಿನ ಸಂಭಾಷಣೆ ನಡೆಯಿತು :

ಲೇಡಿ ಬೆಕ್:—ಬಾಂಬು ಬಿದ್ದಾಗ ನಿಮಗೆ ಹೇಗೆ ಅನಿಸಿತು ?

ವ್ಹಾಯಿಸರಾಯರು:—ಏನೂ ಇಲ್ಲ! ಕೆಲವು ಮಿನಿಟುಗಳ ವರೆಗೆ ನನಗೆ ಅರಿವು ಇದ್ದಿಲ್ಲ. ಬಾಂಬು ಬಿದ್ದ ಸುದ್ದಿಯನ್ನು ನೀವು ಎಲ್ಲಿ ಕೇಳಿದಿರಿ ?

ಲೇಡಿ ಬೆಕ್:—ನಾನು ಕಲಕತ್ತೆಯಲ್ಲಿ ಕುದುರೆಯ ಶರ್ಯತ್ತು ನೋಡುತ್ತಿದ್ದೆ. ಆಗ ವರ್ತಮಾನಪತ್ರ ಮಾರುವ ಹುಡುಗರು ಒದರುತ್ತ ಬಂದರು.

ವ್ಹಾಯಿಸರಾಯ:—ಆಗ ನಿಮ್ಮ ಮನಸ್ಸಿನಲ್ಲಿ ಯಾವ ವಿಚಾರಗಳು ಬಂದವು ?

ಲೇಡಿ ಬೆಕ್:—ನನ್ನ ಗಂಡನು ಎಲ್ಲಕ್ಕೂ ಮೊದಲು ಸುದ್ದಿಯನ್ನು ಇಂಗ್ಲಂಡಿಗೆ ಕಳಿಸಿದನೋ ಇಲ್ಲವೋ ಎಂಬ ವಿಚಾರ ಬಂತು !

ವ್ಹಾಯಿಸರಾಯ:—ನಿನ್ನ ಗಂಡನು ಮೊದಲು ಸುದ್ದಿ ಕಳಿಸಿ ಹಿಂದುಸ್ತಾನ ಸರಕಾರಕ್ಕೆ ಚನ್ನಾಗಿ 'ತಾಕೀದು' ಕೊಡಿಸಿದನು !!

ಜಗತ್ತಿನ ಪ್ರವಾಸ ಮಾಡಿದ ಒಬ್ಬ ಇಂಗ್ಲೀಷ ಪ್ರವಾಸಿಯು ಅಮೇರಿಕೆಗೆ ಹೋದನು. ಅಲ್ಲಿಯ ವರ್ತಮಾನಪತ್ರದ ಸುದ್ದಿಗಾರನಿಗೆ ತನ್ನ ಪ್ರವಾಸದ ಅನುಭವವನ್ನು ವರ್ಣಿಸಹತ್ತಿದನು. ಆಗ ಹಿಂದುಸ್ತಾನದ ಸುದ್ದಿಯೂ ಹೊರಟಿತು. ಆಗ ಆ ಸುದ್ದಿಗಾರನು, "ನಿಮಗೆ ಬಂಗಾಲಿ ಹುಲಿಗಳ ದರುಶನ ಆಯಿತೋ ?" ಎಂದು ಕೇಳಿದನು. ಆಗ ಆ ಆಂಗ್ಲನು ಅಂದನು : "ಇಲ್ಲ. ಹುಲಿಗಳು ಹಗಲು ಮಲಗುತ್ತಿದ್ದವು. ಆಗ ನಾನು ತಿರುಗಾಡುತ್ತಿದ್ದೆ. ರಾತ್ರಿ ಹುಲಿಗಳು ಹೊರಬೀಳುತ್ತಿದ್ದವು. ಆಗ ನಾನು ಮಲಗುತ್ತಿದ್ದೆ." ಮರುದಿವಸ

"ಚತುರ ಆಂಗ್ಲ ಪ್ರವಾಸಿಯು ಬಂಗಾಲಿ ಹುಲಿಗಳನ್ನು ತಪ್ಪಿಸಿದ ರೀತಿ" ಎಂಬ ಒಕ್ಕಣಿಕೆಯ ಕೆಳಗೆ ಈ ಸುದ್ದಿಯು ಪ್ರಸಿದ್ಧವಾಯಿತು!

*

ಲಂಡನ್ ಪಟ್ಟಣದಲ್ಲಿ ಪಿಕ್ಯಾಡಲಿ ಸ್ಕ್ವೇರ್ ಎಂಬ ಹೆಸರಿನ ಬೀದಿಯಲ್ಲಿ ಯಾವಾಗಲೂ ಜನದಟ್ಟಣೆಯು ಬಹಳ. ಈ ಚೌಕಿನಲ್ಲಿ ಒಬ್ಬ ಕುಡುಕನು ಜೋಲಿ ಹೊಡೆಯುತ್ತ ಹೋಗುತ್ತಿದ್ದನು. ಒಬ್ಬ ಕ್ರಿಶ್ಚಿಯನ್ ಪಾದ್ರಿಯು ಅವನಿಗೆ ಭೆಟ್ಟಿಯಾದನು :

ಪಾದ್ರಿ :—ನೀನು ಕುಡಿಯುವ ಮಾರ್ಗವನ್ನು ಬಿಡು. ನನ್ನ ಸಂಗಡ ನಡೆ. ನಾನು ನಿನಗೆ ಸ್ವರ್ಗದ ಮಾರ್ಗವನ್ನು ತೋರಿಸುವೆ.

ಕುಡುಕ:—ಎಷ್ಟು ದಿವಸಗಳಿಂದ ನೀವು ಈ ಸ್ವರ್ಗದ ಮಾರ್ಗ ಹಿಡಿದಿರುವಿರಿ ?

ಪಾದ್ರಿ :—ಕಳೆದ ೨೮ ವರ್ಷಗಳಿಂದ.

ಕುಡುಕ :—೨೮ ವರ್ಷಗಳ ನಂತರ ನೀವು ಇನ್ನೂ ಪಿಕ್ಯಾಡಿಲಿ ಚೌಕಿನಲ್ಲಿಯೇ ಇರುವಿರಾದರೆ ನೀವು ನಿಮ್ಮ ಮಾರ್ಗವನ್ನು ಬಿಟ್ಟು ನನ್ನನ್ನು ಹಿಂಬಾಲಿಸುವದು ಲೇಸು!

# ಅನೇಕ ಪತ್ನೀವ್ರತ—ಅತ್ತೆಸೊಸೆಯರ ಹೊಡೆದಾಟ

ಶ್ರೀಕೃಷ್ಣನ ಹದಿನಾರು ಸಾವಿರ ಹೆಂಡಂದಿರ ಮತ್ತು ಸಾಲೊಮನನ ಮೂರು ನೂರು ಹೆಂಡಂದಿರ ಕಥೆಗಳನ್ನು ಕೇಳಿದ ನಮಗೆ ವಾರಸಾ ಪಟ್ಟಣ ದಲ್ಲಿಯ ಲೆವಿನಿಸ್ಕಿ ಎಂಬವನು ೩೬ ಸಾರೆ ಲಗ್ನವಾದದ್ದನ್ನು ಕೇಳಿ ಆಶ್ಚರ್ಯ ವೆನಿಸಲಾರದು. ಆದರೆ ಲೆವಿನಿಸ್ಕಿಯ ಮದುವೆಗಳ ವಿಶೇಷ ಪರಿಚಯವು ಚಮತ್ಕಾರದ್ದಾಗಿದೆ. ಇವನು ೨೬ ವರ್ಷದವನಿದ್ದಾಗ ಇವನ ಪ್ರಥಮ

ಲಗ್ನವಾಯಿತು. ಈಗ ಇವನ ವಯಸ್ಸು ೩೩ ವರ್ಷ. ಅಂದರೆ ೭ ವರ್ಷಗಳಲ್ಲಿ ೩೬ ಹೆಂಡಂದಿರನ್ನು ಮದುವೆಯಾದನು. ಅಂದರೆ ಪ್ರತಿ ವರ್ಷ ಸರಾಸರಿ ೫.೧೪೨೮೫೭ ಸ್ತ್ರೀಯರನ್ನು ಲಗ್ನವಾದನು. ಇಷ್ಟೇ ಅಲ್ಲ; ೩೭ನೆಯ ಲಗ್ನದ ತಯಾರಿ ಮಾಡಿದ್ದನು. ವಧುವಿನೊಡನೆ ಮಂಗಲಕಾರ್ಯಕ್ಕಾಗಿ ಚರ್ಚಿಗೆ ಹೋದನು. ಅಷ್ಟರಲ್ಲಿ ಅವನ ೩೬ನೆಯ ಹೆಂಡತಿಯು ಪೋಲೀಸರೊಡನೆ ಬಂದು ಆ ಶುಭಕಾರ್ಯವನ್ನು ತಡೆದಳು. ಹೀಗಾಗಿ ಕೈಗೆ ಬಂದ ೩೭ನೆಯ ತುತ್ತು ಬಾಯಿಗೆ ಬರಲಿಲ್ಲ. ಮುಷ್ಟಿಯುದ್ಧ (Boxing) ವು ಇವನ ಉದ್ಯೋಗವು. ಪೋಲೀಸರೊಡನೆ ಮುಷ್ಟಿಯುದ್ಧ ಹೂಡಿ ತನ್ನ ಸಂಕಲ್ಪವನ್ನು ಪೂರ್ಣ ಮಾಡಲು ಇಚ್ಛಿಸಿದ್ದರೆ ಇವನಿಗೆ ತಾತ್ಪೂರ್ತಿಕ ಯಶವು ದೊರೆಯುವ ಸಂಭವವಿತ್ತು. ಆದರೆ........

"ಹೊತ್ತು ಬಂದಂತೆ ಕೊಡೆ ಹಿಡಿಯುವವನು ಕಡುಜಾಣ" ಎಂದು ಕವಿಯು ಹೇಳಿದಂತೆ ಸಿಂಗಾರಾಗಿ ಬಂದ ವಧುವಿಗೆ ಶರಣು ಚರ್ಚಿನಿಂದ ಪೋಲಿಸ ಚೌಕಿಗೆ ಹೋದನು!

ಕ್ರಿಶ್ಚಿಯನ್ ಧರ್ಮದ ಪ್ರಕಾರ ಒಬ್ಬನಿಗೆ ಒಂದೇ ಕಾಲಕ್ಕೆ ಇಬ್ಬರು ಹೆಂಡಂದಿರು ಇರಕೂಡದು. ಇಬ್ಬರು ಅತ್ತೆಯರ ಕಾಟದಿಂದ ಅಳಿಯನನ್ನು ಉಳಿಸಲು ಬಹಳ ಮಾಡಿ ಈ ನಿಯಮವಿರಬೇಕು!

ಕ್ರಿಶ್ಚಿಯನ್‌ರಲ್ಲಿ ವಧುವು ಲಗ್ನದ ಕಾಲಕ್ಕೆ ಬಿಳಿಯ ಪೋಷಾಕು ಧರಿಸುವ ರೂಢಿಯುಂಟು. ಬಿಳಿಯ ಬಣ್ಣ ಸುಖಸಂತೋಷದ ಚಿನ್ಹವಂತೆ ಹಾಗಾದರೆ ವರನು ಲಗ್ನದ ಕಾಲಕ್ಕೆ ಕರಿಯ ಬಣ್ಣದ ಪೋಷಾಕವನ್ನೇ ಧರಿಸುತ್ತಾನಲ್ಲ! ಅದರ ಕಾರಣವೇನು?

* * * *

ಅತ್ತೆ-ಸೊಸೆಯರ ಹೊಡೆದಾಟದಲ್ಲಿ, ಪಾಪ, ಗಂಡ (ಸೊಸೆಯ ಗಂಡ ಅಥವಾ ಅತ್ತೆಯ ಮಗ) ನ ಜೀವವು ಹೇಗೆ ಸಣ್ಣದಾಗುತ್ತದೆಂಬದನ್ನು ಶ್ರೀ. ಟಿ. ಪಿ. ಕೈಲಾಸಮ್ ಇವರು ತಮ್ಮ ಹೋಮ್‌ರೂಲ್ ನಾಟಕದಲ್ಲಿ

ಚನ್ನಾಗಿ ಚಿತ್ರಿಸಿರುವರು. "ಹೆಂಡತಿಯನ್ನು ನ್ಯೈಹುಳಿ ಹೊಡೆದು ಹೊರಗೆ ಹಾಕುವೆನು" ಎಂದು ತಾಯಿಯ ಎದುರಿಗೆ ಹೇಳುವದು. "ಅವ್ವ ಮುದುಕಿ ಯಾಗಿದ್ದಾಳೆ. ಕಾಶಿಯ ಯಾತ್ರೆಗೆ ಕಳಿಸುವೆನು. ದಾರಿಯಲ್ಲಿಯೇ ಸಾಯುವಳು" ಎಂದು ಹೆಂಡತಿಗೆ ಸಮಾಧಾನ ಹೇಳುವದು. ಕನ್ನಡವಾಣಿಯ ಜೇಷ್ಠ ಪುತ್ರರೆಂದು ಕರೆಯಲ್ಪಡುವ ಶ್ರೀ. ಮುದವೀಡು ಕೃಷ್ಣರಾಯರು Horns of the Dilemma ಇದರ ಅರ್ಥವನ್ನು "ಒಂದು ಕಡೆಗೆ ಭಾವಿ ಮತ್ತೊಂದು ಕಡೆಗೆ ಕೆರೆ" ಎಂದು ಮಾಡುತ್ತಾರೆ. ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿರುವವನ ಒಂದು ಉದಾಹರಣೆ ಕೊಡಲು ನನಗೆ ಹೇಳಿದರೆ, ಮೇಲೆ ವಿವರಿಸಿದ ಗಂಡ (ಸೊಸೆಯ ಗಂಡ, ಅತ್ತೆಯ ಮಗ) ನ ಕಡೆಗೆ ಬೆರಳು ಮಾಡಿ ತೋರಿಸುವೆನು.

* * * *

ಅತ್ತೆಗೊಂದು ಕಾಲವಾದರೆ ಸೊಸೆಗೊಂದು ಕಾಲವಂತೆ, ಸೊಸೆಗೆ ಇದೊಂದು ದೊಡ್ಡ ಆಶೆ. ಆದರೆ ಸೊಸೆಯ ದಿವಸ ಬರುವದರೊಳಗೆ ಸೊಸೆಯು ಸ್ವತಃ ಅತ್ತೆಯಾದರೆ (ಅಂದರೆ ಸೊಸೆಯ ಸೊಸೆ ಬಂದರೆ) ಮಾತ್ರ ಫಜೀತಿ! ಅಂದರೆ "ಒಂದು ಕಡೆಗೆ ಭಾವಿ ಮತ್ತೊಂದು ಕಡೆಗೆ ಕೆರೆ" ಅಥವಾ Horns of Dilemmaದ ಮತ್ತೊಂದು ದೃಷ್ಟಾಂತವೆಂದೇ ಹೇಳಬಹುದು.

## ಸಂಭವ—ಅಸಂಭವ

"ಜಗತ್ತಿನಲ್ಲಿ ಯಾವದೂ ಅಸಂಭವವಿಲ್ಲ" ಎಂದು ನೆಪೋಲಿಯನ್ನನು ಹೇಳಿದ್ದರಿಂದಲೂ ೨ನೇ ದುಂಡುಮೇಜಿನ ಪರಿಷತ್ತಿನಲ್ಲಿ ಮ. ಗಾಂಧಿಯವರು ತಮ್ಮ ಶಬ್ದಕೋಶದಲ್ಲಿ "ಅಪಜಯ" ಎಂಬ ಶಬ್ದವು ಇಲ್ಲೆಂದು ಉದ್ಗಾರ ತೆಗೆದದ್ದರಿಂದಲೂ ಜನರ ಆಕಾಂಕ್ಷೆಗೆ ಮಿತಿ ಇಲ್ಲದಂತೆ ಆಗಿದೆ. ನೆಲುವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರಲೆತ್ನಿಸುತ್ತಿದೆ. ಜೇಳಿನ ಮಂತ್ರವನ್ನು

ಅರಿಯುವವರು ಹಾವಿನ ಗುದ್ದಿನಲ್ಲಿ ಕೈಹಾಕಹತ್ತಿರುವರು. ಹೊಂಡದಲ್ಲಿ ಈಸದವರು ಹೊಳೆಯಲ್ಲಿ ಧುಮುಕ ಹೋಗುತ್ತಿರುವರು.

* * * *

ಒಂದೇ ಸವನೆ ಈಸುವವರಲ್ಲಿ, ಓಡುವವರಲ್ಲಿ, ಕುಣಿಯುವವರಲ್ಲಿ, ನಗುವವರಲ್ಲಿ, ಮಾತಾಡುವವರಲ್ಲಿ, ಆಡುವವರಲ್ಲಿ, ಊಟ ಮಾಡುವವರಲ್ಲಿ ಮೋಟಾರ ನಡಿಸುವವರಲ್ಲಿ, ವಿಮಾನ ಹಾರಿಸುವವರಲ್ಲಿ—ಎಲ್ಲದರಲ್ಲಿ ಮೇಲಾಟ; ಎಲ್ಲದರಲ್ಲಿ ವಿಕ್ರಮ, ರಿಕಾರ್ಡ್ ಮುರಿಯುವ ಭರಭರಾಟಿ ನಡೆದಿದೆ. ನಮ್ಮ ದೃಷ್ಟಿಯಲ್ಲಿ ಒಂದೇ ಮೇಲಾಟ ಉಳಿದಿದೆ. ಅದೆಂದರೆ ಸುಮ್ಮನೆ ಕೂಡ್ರುವದರಲ್ಲಿ ಮೇಲಾಟ !

* * * *

ಮಾತನಾಡದೆ ಮಿಸುಗದೆ ಸುಮ್ಮನೆ ಕೂಡ್ರಬೇಕಾದರೆ ಮನಸ್ಸಿನ ಸಂಯಮನ ಬೇಕಾಗುತ್ತದೆ. ಮನಬಂದಂತೆ ಮಾಡುವದು, ಮಾತನಾಡುವದು ಮಾನವಜಾತಿಯ ಹುಟ್ಟುಗುಣ. ಸುಮ್ಮನೆ ಕೂಡ್ರುವದು ಮನಸ್ಸಿನ ಮನಸ್ಸಿಗೆ ಬರುವದಿಲ್ಲ ! ಪುರಂದರ ದಾಸರು ಹೇಳಿಲ್ಲವೆ !

"ಮನವೆಂಬ ಮರ್ಕಟವ ತಡೆಯಲಾರೆನು ದೇವಾ !"

* * * *

ಮನುಷ್ಯನೆಂದರೆ ಮಂಗನ ವಿಕಸಿತ ರೂಪವೆಂದು **ಡಾರ್ವಿನ** ಸಾಹೇಬರು ಹೇಳಿಲ್ಲವೆ ? ಮಂಗತನ ಮತ್ತು ಮೌನ ವ್ರತಗಳ ನಡುವೆ ಭೂಮ್ಯಾಕಾಶದಷ್ಟು ಅಂತರವಿದೆ. ಪೂರ್ವಕಾಲದಲ್ಲಿ ಋಷಿಗಳು ಮೌನವ್ರತವನ್ನು ಧರಿಸುತ್ತಿದ್ದರಂತೆ. ಅಂದರೆ ಅಸಂಭವವಾದ ಕೆಲಸಗಳನ್ನು ಮಾಡಲೆತ್ನಿಸುವ ಪರಿಪಾಠವು ಪುರಾತನಕಾಲದಿಂದ ಇರುವದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ !

* * * *

ಅರೆಗೊಡದ ಸಪ್ಪಳ ಬಹಳ. ತುಂಬಿದ ಕೊಡವು ತುಳುಕುವದಿಲ್ಲ. ವಿದ್ಯಾಪರಿಪೂರ್ಣನಿಗಿಂತ ಅರ್ಧಕಲಿತ ಪಂಡಿತನ ಗೊಂದಲ ಬಹಳ. ಇದರ ಮೇಲಿಂದ ದೀಢಪಂಡಿತ ಮತ್ತು ಮುಕ್ಕಾಲುಪಂಡಿತರ ಗೊಂದಲವು ಎಷ್ಟು ಇರುತ್ತದೆಂಬದನ್ನು ತ್ರೈರಾಶಿಕ ಹಾಕಿ ಗಣಿತಜ್ಞಾನವಿದ್ದವರು ಹುಡುಕಿ ತೆಗೆಯಬಹುದು. ಆದರೆ ಗಣಿತ ಶಾಸ್ತ್ರದ ಪರಿಪೂರ್ಣ ಜ್ಞಾನವಿದ್ದವರು

ಮಾತ್ರ ಇದನ್ನು ಹುಡಿಕಿ ತೆಗೆಯಬೇಕೆಂದು ನಮ್ಮ ವಿನಂತಿಯು. ಇಲ್ಲವಾದರೆ ಗಣಿತಶಾಸ್ತ್ರದ ಅರ್ಧ, ಮುಕ್ಕಾಲು ಅಥವಾ ದೀಡಪಂಡಿತರು ಸಾದಾ ತ್ರೈರಾಶಿಕದ ಪಂಚರಾಶಿಯನ್ನಾಗಲಿ ಸಪ್ತರಾಶಿಯನ್ನಾಗಲಿ ಮಾಡಿ, ಇದ್ದ ಹನ್ನೆರಡು ರಾಶಿಗಳಿಲ್ಲಿಯ ನಾಲ್ಕೆಂಟು ರಾಶಿಗಳನ್ನು ಕಳೆದು ಕೊಡ್ರಬಹುದು!

* * * *

ಆಸ್ಟ್ರೇಲಿಯಾ ದೇಶದಲ್ಲಿ ಒಬ್ಬ ದೊಡ್ಡ ವ್ಯಾಪಾರಿಯು ಇದ್ದನು. ಅವನಿಗೆ ವ್ಯವಹಾರಜ್ಞಾನಶೂನ್ಯ ಮಗನೊಬ್ಬನಿದ್ದನು. ತಂದೆ ಮಕ್ಕಳಿಬ್ಬರೂ ಪ್ರವಾಸಕ್ಕೆ ಹೊರಟರು. ಒಂದು ಊರಿಗೆ ಬಂದರು. ತಂದೆಯು ಪ್ರಸಿದ್ಧ ವ್ಯಾಪಾರಸ್ಥನು. ಆದ್ದರಿಂದ ಆ ಊರಲ್ಲಿ ಅವನ ಸನ್ಮಾನಾರ್ಥವಾಗಿ ಅನೇಕ ತಾಂಬೂಲ ಭೋಜನ ಸಮಾರಂಭಗಳಾದವು. ಒಂದು ಭೋಜನ ಸಮಾರಂಭಕ್ಕೆ ಮಗನೂ ಬರುವೆನೆಂದು ಹಟ ತೊಟ್ಟನು. “ ನೀನು ಏನಾದರೂ ಮೂರ್ಖತನದ ಮಾತನಾಡಿಬಿಡುವಿ ಬೇಡ ” ಎಂದು ತಂದೆಯು ಹೇಳಿದನು. ಕಡೆಗೆ ಮಾತನಾಡದೆ ಸುಮ್ಮನೆ ಕೂಡ್ರಬೇಕೆಂಬ ಕರಾರಿನ ಮೇಲೆ ಮಗನು ತಂದೆಯ ಸಂಗಡ, ಬಹಳ ಆಗ್ರಹ ಮಾಡಿ, ಹೊರಟನು. ಕರಾರಿನಂತೆ ಸುಮ್ಮನೆ ಒಂದು ಮೂಲೆಯಲ್ಲಿ ಮಗನು ಕುಳಿತನು. ಉಳಿದವರು ಹೇಗೆ ಬಿಡುವರು ? ಮುಖ್ಯ ಅತಿಥಿಯ ಮಗನನ್ನು ಮಾತನಾಡಿಸದಿದ್ದರೆ ಹೇಗೆ ? “ ನೀನು ಏನು ಕಲಿಯುತ್ತೀಯಪ್ಪಾ ? ” ಎಂದು ಒಬ್ಬನು ಕೇಳಿದನು. “ ನೀನು ಯಾವ ಉದ್ಯೋಗ ಮಾಡುತ್ತೀ ? ” ಎಂದು ಮತ್ತೊಬ್ಬನು ಕೇಳಿದನು. “ ನಿನ್ನ ವಯಸ್ಸು ಎಷ್ಟು ? ” ಎಂದು ಬೇರೊಬ್ಬನು ಕೇಳಿದನು. ಆತ ಒಬ್ಬನಿಗೂ ಉತ್ತರ ಕೊಡಲಿಲ್ಲ. ಕರಾರಿನಂತೆ ಮಗನು ಸುಮ್ಮನೆ ಕುಳಿತಿದ್ದನು ! ಕಡೆಗೊಬ್ಬನು “ ನಿನ್ನ ಪ್ರಕೃತಿಯು ನೆಟ್ಟಗಿಲ್ಲವೇನು ? ” ಎಂದು ಕೇಳಿದನು. ಮತ್ತೆ ಉತ್ತರವಿಲ್ಲ. ಆಗ ಒಬ್ಬನು: “ ಆ ಮೂರ್ಖನಿಗೇನು ಕೇಳುವಿರಿ? ಹೋಗಲಿ ಬಿಡಿರಿ ! ” ಎಂದು ಅಂದನು. ಆಗ ಮಗನು ಸಂತಾಪಪಟ್ಟು ಕುಳಿತ ಮೂಲೆಯಿಂದಲೆ ಒದರಿ ತಂದೆಗೆ, “ಅಪ್ಪಾ, ನಾನು ಸುಮ್ಮನೆ ಕುಳಿತಿದ್ದರೂ ನಾನು ಮೂರ್ಖನಿದ್ದೇನೆಂದು ಈ ಜನರು ಕಂಡು ಹಿಡಿದರು ” ಎಂದು ಹೇಳಿದನು !!

# ಬಂಗಾರದ ಮಾತು

ಶ್ರಮವಿಲ್ಲದೆ ದುಡ್ಡು ಗಳಿಸಬೇಕೆಂಬ ಇಚ್ಛೆಯು ಅನೇಕರಲ್ಲಿದೆ. ಎಲ್ಲ ದೇಶಗಳಲ್ಲಿದೆ. ಕೆಲವರು ತಾಮ್ರ-ಹಿತ್ತಾಳಿಗಳನ್ನು ಬಂಗಾರವನ್ನಾಗಿ ಮಾಡುವ ಸಾಧನೆ (ಕೀಮಿಯಾ) ಯಲ್ಲಿ ತೊಡಗುತ್ತಾರೆ. ಕೆಲವರು ಭೂಮಿಯ ಹೊಟ್ಟೆಯಲ್ಲಿ ಅಡಗಿಸಿಟ್ಟ ದ್ರವ್ಯವನ್ನು ಹುಡುಕಲು ಪ್ರಯತ್ನಿಸುತ್ತಾರೆ. ಕೆಲವರು ಲಾಟರಿ ಅಥವಾ ಶರ್ತುಗಳ ಮಾರ್ಗವನ್ನು ಹಿಡಿಯುತ್ತಾರೆ. ಮಾರ್ಗಗಳು ಬೇರೆ ಬೇರೆ. ಆದರೆ ಧ್ಯೇಯವು ಒಂದೇ — ಧನಸಂಪಾದನೆ, ದ್ರವ್ಯಸಂಪಾದನೆ. ಈ ಮಾರ್ಗದಿಂದ ದ್ರವ್ಯಸಂಪಾದನೆ ಮಾಡಿದವರು ಕ್ವಚಿತ್. ಆದರೆ ಇಂಥ ಪ್ರಯತ್ನಗಳಲ್ಲಿ ಕೈಯಲ್ಲಿದ್ದ ದುಡ್ಡನ್ನು ಕಳಕೊಂಡವರು ಅನೇಕರಿದ್ದಾರೆ.

ಬಡವನು ಧನ ಬಯಸುತ್ತಾನೆ; ಸಿರಿವಂತನೂ ಬಯಸುತ್ತಾನೆ; ಉದಾರನೂ ಧನ ಬಯಸುತ್ತಾನೆ; ಮಿತವ್ಯಯಿಯೂ ಧನ ಬಯಸುತ್ತಾನೆ; ದುಂದುಗಾರನೂ ಧನ ಬಯಸುತ್ತಾನೆ. ಈ ಧನ ಬಯಸುವ ರೋಗಕ್ಕೆ ಧನ್ವಂತರಿಗೆ ಸಹ ಉಪಾಯ ಗೊತ್ತಿದ್ದಿರಲಿಕ್ಕಿಲ್ಲ.

* * * *

ತಾಮ್ರದ ದುಡ್ಡು ತಾಯಿಮಕ್ಕಳನ್ನು ಕೆಡಿಸುತ್ತದಂತೆ. ಅದರಂತೆ ತಾಯಿಮಕ್ಕಳು ಸಹ ತಾಮ್ರದ ದುಡ್ಡನ್ನು ಕೆಡಿಸುತ್ತಾರೆ. ಇದರಲ್ಲಿ ಪಾಪಿ ಅಂದರೆ ಆ ಬಡ ತಂದೆಯು.

ಕೂತು ಉಂಡರೆ ಕೊಡ ಹೊನ್ನು ಸಾಲದು ಎಂದು ಹಿರಿಯರು ಹೇಳುತ್ತಾರೆ. ಆದರೆ ನಿಂತು ಉಂಡರೆ ಸಹ ಹೊನ್ನು ತೀವ್ರ ಖರ್ಚಾಗುವದೆಂದೂ ಅವನು ತೀವ್ರ ಮಲಗುವನೆಂದೂ ನಮ್ಮ ಅಭಿಪ್ರಾಯ. ಅದಕ್ಕಾಗಿಯೇ

ಎಲ್ಲ ದೇಶಗಳಲ್ಲಿ, ಎಲ್ಲ ಜನಾಂಗಗಳಲ್ಲಿ, ಕೂತು ಊಟ ಮಾಡುವ ಪರಿಪಾಠ ವನ್ನು ಹಾಕಿದ್ದಾರೆ. ಕೊಡ ಹೊನ್ನು ಸಾಲಲಿ, ಸಾಲದಿರಲಿ, ಕೂತು ಉಣ್ಣುವದೇ ಹಿತಕರವೆಂದು ನಮಗೆ ಎನಿಸುತ್ತದೆ.

* * * *

ಇಷ್ಟೇ ಅಲ್ಲ; ನಿಂತು ಉಣ್ಣುವ ಚಾಳಿಯು ದನಕರುಗಳದು; ಪಕ್ಷಿ ಮೃಗಗಳದು. ಅವು ನಿಂತು ಉಣ್ಣುವದರಿಂದ ಅವುಗಳ ಹತ್ತಿರ ಒಂದು ಕಾಸು ಸಹ ಇರುವದಿಲ್ಲ. ಆದ್ದರಿಂದ ಕೂತು ಊಟ ಮಾಡುವದು ಹಿತಕರ ವೆಂದು ಪುನಃ ಹೇಳುತ್ತೇನೆ. ಊಟದ ಹೊತ್ತಾಯಿತು. ಊಟಕ್ಕೆ ಕೂಡ್ರುವೆ!

*

ಅಮೇರಿಕೆಯ ಒಬ್ಬ ಡಾಕ್ಟರನು ಸಣ್ಣ ಕೂಸುಗಳನ್ನು ತೊಟ್ಟಿಲಿನಲ್ಲಿ ಹಾಕಿ ತೂಗಬಾರದೆಂದು ಅಭಿಪ್ರಾಯಪಟ್ಟಿದ್ದಾನೆ. ಸಣ್ಣ ಕೂಸುಗಳನ್ನು ತೊಟ್ಟಿಲಿನಲ್ಲಿ ತೂಗಬಾರದೆಂದರೇನು? ಮುದುಕರನ್ನು ತೊಟ್ಟಿಲಿನಲ್ಲಿ ಮಲಗಿಸಿ ತೂಗಬೇಕೇ? ಆದಿರಲಿ, ವೈದ್ಯಕೀಯ ದೃಷ್ಟಿಯಿಂದ ಈ ಡಾಕ್ಟರನ ಅಭಿಪ್ರಾಯವು ಹೇಗೇ ಇರಲಿ; ಸಾಂಸ್ಕೃತಿಕ ದೃಷ್ಟಿಯಿಂದ ನಮ್ಮ ದೇಶಕ್ಕೆ ಎಷ್ಟು ಆಪಘಾತವಾಗುವದೆಂಬದರ ಕಲ್ಪನೆಯೇ ಇಲ್ಲ. ತೊಟ್ಟಿಲದಲ್ಲಿ ಹಾಕುವ ಸಮಾರಂಭವು ಮುಗ್ಗಿ ಹೋಗುವದು. ಕೂಸು ಅಳಹತ್ತಿದರೆ, ಅದನ್ನು ತೊಟ್ಟಿಲಲ್ಲಿ ಹಾಕಿ ತಾಯಿಯು ತರತರದ ಧ್ವನಿ ತೆಗೆದು ತರತರದ ರಾಗಗಳಲ್ಲಿ ಹಾಡುವ ಪದಗಳು ಔಷಧಕ್ಕೂ ಸಿಗದಂತೆ ಆಗುವವು. ಈಗಾಗಲೆ ಹಿಟ್ಟಿನ ಗಿರಣಿಗಳು ಬಂದಂದಿನಿಂದ ಬೆಳಗುಮುಂಜಾನೆಯ ಬೀಸುಕಲ್ಲಿನ ಪದಗಳು ಕೋಳಿ ಕೂಗುವ ಹಳ್ಳಿಗಳಿಂದಲೂ ಕೇಳಿಸಿ ಬರುವದಿಲ್ಲ. ಬೀಸುವಾಗಿನ, ಕುಟ್ಟುವಾಗಿನ, ಹಂತಿ ಹೊಡೆಯುವಾಗಿನ ಪದಗಳು ವಿರಳ ವಾಗಹತ್ತಿವೆ. ತೊಟ್ಟಿಲಿನ ಜೋಗುಳ ಪದಗಳೂ ಲಯವಾದರೆ ಎಷ್ಟು ಅನಾಹುತವಾಗುವದು! ಜನಪದ ಸಾಹಿತ್ಯ ಸಂಶೋಧಕರು ಈ ತೊಟ್ಟಿಲಿನ ಪದಗಳ ಸಂಗ್ರಹ ಮಾಡುವದನ್ನು ಕೈಕೊಳ್ಳುವರೇ? ಶಕ್ಯವಿದ್ದರೆ ರಿಕಾರ್ಡ ಸಹ ಮಾಡಿಸುವದು ನೆಟ್ಟಗೆ!

ಕ್ಕೆ ತೊಟ್ಟಿಲಿನ ಪದಗಳಿಂದ ಅಳುವ ಕೂಸು ಮಲಗುವದೋ ಮಲಗಿದ ಜನರು ಎಚ್ಚರಾಗುವರೋ ಎಂಬದು ವಾದಗ್ರಸ್ತ ವಿಷಯ. ಜನರ ಭಿನ್ನ ಭಿನ್ನ ಅನುಭವದಂತೆ ಅವರ ಅಭಿಪ್ರಾಯ. ತೊಟ್ಟಿಲ ತೂಗುವಾಗ ಹಾಡುವವರಿಗೆ ನಿದ್ರೆ ಬರುವದಿಲ್ಲೆಂದು ನಮ್ಮ ಅಭಿಪ್ರಾಯ!

ಮೇಲೊಂದು ಪ್ಯಾರಾದಲ್ಲಿ "ಕೋಳಿ ಕೂಗುವ ಹಳ್ಳಿ" ಎಂಬ ಸಾಮಾನ್ಯವಾಗಿ ಉಪಯೋಗಿಸಲ್ಪಡುವ ವಾಕ್ಯವನ್ನು ಬರೆಯಲಾಗಿದೆ. ಆದರೆ ಕೂಗುವದು ಕೋಳಿಯೋ ಅಥವಾ ಹುಂಜವೋ? ಕೂಗುವದು ಹುಂಜವಾದರೆ ಹಾಗೇಕೆ ಅನ್ನುವದಿಲ್ಲ?

# ಕೊನೆಯ ಮಾತು

ನಗೆ ಇದು ಮನುಷ್ಯನಲ್ಲಿರುವ ಒಂದು ವೈಶಿಷ್ಟ್ಯವು. ಜಗತ್-ನಿರ್ಮಾಣಕನು ಹುಟ್ಟಿಸಿದ ಪ್ರಾಣಿಕೋಟಿಯಲ್ಲಿ ಮನುಷ್ಯ—ಅರ್ಥಾತ್ ಸ್ತ್ರೀ ಪುರುಷರು ಮಾತ್ರ ನಗುವ ಗುಣವುಳ್ಳವರಿದ್ದಾರೆ—ಇನ್ನೊಂದು ಪ್ರಾಣಿಗೆ ಈ ಮಾನವ ವೈಶಿಷ್ಟ್ಯವನ್ನು ದೇವರು ದಯಪಾಲಿಸಿರುವನು. ಅದಾವ ದೆಂದರೆ "ಹಾಯಿನಾ" ಎಂಬ ನಾಯಿಯನ್ನು ಹೋಲುವ ಕೆಳಜಾತಿಯ ಪ್ರಾಣಿಯು!

* * * *

ಕೆಲವು ಜನರು ಇಡಿ ಆಯುಷ್ಯ ನಗುವದಿಲ್ಲ. ಇಂಥವರಿಗೆ ಹಾಯಿನಾ ಪ್ರಾಣಿಗಿಂತ ಅನಿಷ್ಟರೆಂದು ಕರೆಯದೆ ಗತ್ಯಂತರವಿಲ್ಲ.

* * * *

"ನಗೆ" ಈ ವೈಶಿಷ್ಟ್ಯವನ್ನು ದಯಪಾಲಿಸುವದರಲ್ಲಿ ದೇವರ ಕೆಲ ವೊಂದು ಉದ್ದೇಶ ಉಂಟೆಂದು ಸೂಕ್ಷ್ಮವಾಗಿ ವಿಚಾರಿಸಿದರೆ ತಿಳಿಯದಿರದು. ಅಸಮಾಧಾನ, ಚಿಂತೆ, ದುಃಖ ಮುಂತಾದ ಗುಣಗಳೂ ಮಾನವ ಜಾತಿಯ ವೈಶಿಷ್ಟ್ಯಗಳಾಗಿವೆ. ಇವುಗಳನ್ನು ಶರೀರದಿಂದ ಹೊಡೆದೋಡಿಸಲು ನಗೆಯು

ಯೋಜನೆಯನ್ನು ದೇವರು ಕಲ್ಪಿಸಿದ್ದಾನೆ. ಮನುಷ್ಯನು ನಗುವದರಿಂದ ತನ್ನ ದುಃಖ ಮತ್ತು ಚಿಂತೆಗಳನ್ನು ಹೋಗಲಾಡಿಸಿ ಅವನ್ನು ಮರೆತುಬಿಡುತ್ತಾನೆ.

*    *    *    *

ಕೆಲವರು ಏನೂ ಕಾರಣವಿಲ್ಲದೇ ಸುಮ್ಮಸುಮ್ಮನೆ ನಗುವರು. "ಏನರಿ, ಊರಿಂದ ಯಾವಾಗ ಬಂದಿರಿ?" ಎಂದು ಕೇಳಿದರೆ ಮೊದಲು "ಹಿ, ಹಿ, ಹಿ" ಎಂದು ನಕ್ಕು "ನಿನ್ನೆ" ಎಂಬ ಒಂದು ಶಬ್ದದ ಉತ್ತರವನ್ನು ಕೊಡುವರು.

*    *    *    *

ಕೆಲವರು ನಗುವದೇ ಇಲ್ಲ. ಆದರೆ ತಮ್ಮ ಪ್ರತಿಯೊಂದು ಮಾತಿನಿಂದ ಜನರನ್ನು ನಗಿಸುತ್ತಾರೆ. ಇದು ಮಹತ್ವದ ಕಲೆ ಎಂದು ಹೇಳಬಹುದು. ಇದು ಸಿಕ್ಕವರಿಗೆ ಸಾಧಿಸುವದಿಲ್ಲ. ಚುರುಕು ಬುದ್ಧಿ, ಅನುಭವ ಸಂಗ್ರಹ ಮತ್ತು ವಿನೋದಪರ ಸ್ವಭಾವ ಇವು ಇದ್ದವರು ಮಾತ್ರ ಸಾಧಿಸಬಲ್ಲರು.

*    *    *    *

ಇನ್ನು ಕೆಲವು ಜನರು ಒಂದು ವಿನೋದದ ಮಾತು ಕೇಳಿದ ಕೂಡಲೆ ನಗುವರು. ಕೆಲವರಿಗೆ ನಗೆಯ ಮಾತು ತಾಸು ಎರಡು ತಾಸುಗಳ ನಂತರ ಹೊಳೆದು ಅರ್ಥವಾಗಿ ಆಗ ನಗುವರು. ಕೆಲವರು ಎರಡೆರಡು ಮೂರು ಮೂರು ದಿವಸಗಳ ನಂತರ ಅರ್ಥವಾಗಿ ಆಗ ಒಮ್ಮಿಂದೊಮ್ಮೆ "ಫಕ್" ಎಂದು ನಗುವರು! ಸುತ್ತುಮುತ್ತು ಕುಳಿತವರು ಹುಚ್ಚನಾದನೆಂದು ಕಲ್ಪಿಸುವ ಸಂಭವವಿದೆ. ಕೆಲವರಿಗಂತೂ ಕೆಲವು ನಗೆಯ ಮಾತುಗಳು ಕಡೆಗೂ ಹೊಳೆಯುವದಿಲ್ಲ. ಆ ನಗೆಯ ಮಾತು ಹೇಳಿದವನ ದುರ್ದೈವ.

ವಾಚಕರು ಈ ಪುಸ್ತಕವನ್ನು ಓದಿಓದಿದಂತೆ ಅವರೊಳಗಿನ ರಸಿಕತನವನ್ನು ಕಂಡುಹಿಡಿವರೆಂದೂ, ಓದುತ್ತ ನಕ್ಕರೆಂದೂ ನಾವು ಭಾವಿಸುತ್ತೇವೆ. ಓದಿದ ಎರಡು ಮೂರು ದಿವಸಗಳ ಮೇಲೆ ಅದರೊಳಗಿನ ವಿನೋದವು "ಫಕ್" ಎಂದು ನಗುವ ಪ್ರಸಂಗ ಬರಲಿಲ್ಲವೆಂದು ತುಂಬಾ